**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 13ನೇ ಹಣಕಾಸು ಆಯೋಗದ ಅನುದಾನದಡಿ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಗುಡವಿ ಗ್ರಾಮದ ತೋಟದ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ಅನುಮೋದನೆ ನೀಡಲಾಗಿದ್ದು. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ರೂ.190.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ದ್ವಿಲಕೋಟೆ ಪದ್ದತಿಯಲ್ಲಿ ಕರೆಯಲಾದ ಅಲ್ಪಾವದಿ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 03.03.2012 |
| ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 03.03.2012 |
| ಉದಯವಾಣಿ ಮತ್ತು ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 12.03.2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂರು ಜನ ಗುತ್ತಿಗೆದಾರರು ಬಿಡ್ ಅನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಿರುತ್ತಾರೆ. ಇವರ ತಾಂತ್ರಿಕ ಬಿಡ್ ಅನ್ನು ದಿನಾಂಕ 28.03.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತೆರೆದು ಪರಿಶೀಲಿಸಲಾಗಿರುತ್ತದೆ, ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 13.04.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 146,85,952/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 147,59,059/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು | 166,67,356/– | 13.492 ಹೆಚ್ಚು | 12.93 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 12.93 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ **ಶೇ.10.00%** ಹೆಚ್ಚಿನ ದರಗಳಿಗೆ ಅಂದರೆ ರೂ.**162,34,965/–** ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 31 ಕೆಜಿದು 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 22ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು, ಗುಡವಿ ಗ್ರಾಮದ ತೋಟದ ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 147,59,059/–ಗಳ ಮೇಲೆ ಶೇ. 10.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 162,34,965/–ಗಳಿಗೆ (ರೂ ಒಂದು ಕೋಟಿ ಅರವತ್ತೆರಡು ಲಕ್ಷ ಮೂವತ್ತ ನಾಲ್ಕು ಸಾವಿರದ ಒಂಬತ್ತು ನೂರ ಅರವತ್ತ ಐದು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಜಿ.ಗೋಕುಲ್ ಶೆಟ್ಟಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1743** ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಬೆಳೆ ನಷ್ಟ ಪರಿಹಾರ ನೀಡುವ ಬಗ್ಗೆ.

**ಓದಲಾಗಿದೆ:**

1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ/2012–13/2729, ದಿನಾಂಕ 11/05/2012.
2) ಸರ್ಕಾರದ ಆದೇಶ ಸಂಖ್ಯೆ:ಸನೀಇ 179 ಭೂಸ್ವಾಪ್ರ 2011, ದಿನಾಂಕ 30/03/12.
3) ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರ ಆದೇಶ ಸಂಖ್ಯೆ: ಭೂಸ್ವಾ.ವಿವಹಿ.ರಾ–93/ಎ/00–01, ದಿನಾಂಕ 07/02/2012.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆವರೆಗೆ ಭೂ ಬಾಡಿಗೆ ಅಥವಾ ಬೆಳೆ ನಷ್ಟ ಪರಿಹಾರ ರೂ.41,42,742/–ಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಹಣ ಬಿಡುಗಡೆ ಮಾಡುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 11/05/2012ರ ಪತ್ರದಲ್ಲಿ ಕೋರಿದ್ದಾರೆ.

ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ:

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 11/05/06ರಂದು ಹೊರಡಿಸಲಾಗಿದೆ.
- ಉಪವಿಭಾಗಾಧಿಕಾರಿಗಳು, ಬೈಲಹೊಂಗಲ ಉಪವಿಭಾಗ, ಬೈಲಹೊಂಗಲ ಇವರ ಐತೀರ್ಪಿನ ದಿನಾಂಕ 17/12/07.
- ಜಮೀನಿನ ಕಬ್ಜೆಯನ್ನು 1984ರಲ್ಲಿ ಪಡೆಯಲಾಗಿದೆ.

ಎಲ್.ಎ.ಸಿ.ಪ್ರಕರಣಗಳಲ್ಲಿ ನ್ಯಾಯಾಲಯಕ್ಕೆ ದಾಖಲೆಗಳನ್ನು ಸಲ್ಲಿಸುವ ಸಂದರ್ಭದಲ್ಲಿ ಸ್ವಾಧೀನಕ್ಕೊಳಪಟ್ಟ ಜಮೀನುಗಳನ್ನು 1984ನೇ ಸಾಲಿನಲ್ಲಿ ಕಬ್ಜೆ ಪಡೆದಿರುವುದಾಗಿ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ ಉಪ ವಿಭಾಗ ಬೆಳಗಾವಿ ಇವರು ನ್ಯಾಯಾಲಯಕ್ಕೆ ದಾಖಲೆ ಸಲ್ಲಿಸಿದ್ದರು. ಇದನ್ನು ಆಧರಿಸಿ ಜಮೀನಿನ ಕಬ್ಜೆ ದಿನಾಂಕದಿಂದ 4(1)ರ ಅಧಿಸೂಚನೆ ದಿನಾಂಕದವರೆಗೆ ಬೆಳೆನಷ್ಟ ಪರಿಹಾರ ಪಾವತಿಸಲು ಭೂಮಾಲೀಕರು ಸಲ್ಲಿಸಿದ್ದ ಅರ್ಜಿಯನ್ನು ಪರಿಶೀಲಿಸಿ, ಉಪ ವಿಭಾಗಾಧಿಕಾರಿಗಳು, ಬೈಲಹೊಂಗಲ ಇವರು ಸ.ನಂ.67/2+5+7, 68/1, 71 ಮತ್ತು 47/1ರ 10–36 ಎಕರೆ ಜಮೀನುಗಳಿಗೆ ರೂ.88,54,096–00ಗಳ ಬೆಳೆನಷ್ಟ ಪರಿಹಾರವನ್ನು ಘೋಷಿಸಿದ್ದು, ಅದರಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 30/03/12ರ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾಗಿದೆ. ಇನ್ನುಳಿದ ಸ.ನಂ.67/9, 68/2, 68/4 ಮತ್ತು 68/5ರ 5–04 ಎಕರೆ ಜಮೀನುಗಳಿಗೆ ಉಪವಿಭಾಗಾಧಿಕಾರಿ, ಬೈಲಹೊಂಗಲ ಇವರು ರಚಿಸಿರುವ ಐತೀರ್ಪಿನಂತೆ ಭೂಮಾಲೀಕರಿಗೆ ರೂ.41,42,742/–ಗಳ ಬೆಳೆನಷ್ಟ ಪರಿಹಾರವನ್ನು ಪಾವತಿಸಲು ಹಣ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 85 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 19ನೇ ಜೂನ್ 2012.**

ಬೆಳಗಾಂ ಜಿಲ್ಲೆ, ರಾಮದುರ್ಗ ತಾಲ್ಲೂಕಿನ ಗೊಡಚಿ ಗ್ರಾಮದ ಹದ್ದಿಯಲ್ಲಿ ನಿರ್ಮಿಸಲಾದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ಗೊಡಚಿ ಗ್ರಾಮದ ಸ.ನಂ.67/9, 68/2, 68/4 ಮತ್ತು 68/5ರ 5–04 ಎಕರೆ ಜಮೀನಿಗೆ ಉಪವಿಭಾಗಾಧಿಕಾರಿಗಳು,

ಬೈಲಹೊಂಗಲ ಇವರು ರಚಿಸಿರುವ ಐತೀರ್ಪಿನಂತೆ ರೂ.41,42,742–00ಗಳ (ನಲವತ್ತೊಂದು ಲಕ್ಷದ ನಲವತ್ತೆರಡು ಸಾವಿರದ ಏಳುನೂರ ನಲವತ್ತೆರಡು ರೂ.ಗಳು ಮಾತ್ರ) ಬೆಳೆನಷ್ಟ ಪರಿಹಾರ ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಮರುಹೊಂದಾಣಿಕೆ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1745**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಬಳಗಾನೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 30/12/12ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ ಭೂಸ್ವಾಪ್ರ/2011–12/6663.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಬಳಗಾನೂರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬಳಗಾನೂರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯ ದಿನಾಂಕ 26/09/96.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿ ಭೂಸ್ವಾಧೀನಾಧಿಕಾರಿಗಳು ಐತೀರ್ಪು ರಚಿಸಿದ ದಿನಾಂಕ 22/11/99.

ಭೂಸ್ವಾಧೀನಾದಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಮುದ್ದೇಬಿಹಾಳ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:7/04ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 08/02/10ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ.74,880/–ಗಳನ್ನು ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರು ಅಭಿಪ್ರಾಯ ಪಟ್ಟಿರುತ್ತಾರೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ;

| ಕ್ರಸಂ | ಎಲ್.ಎ.ಸಿ. ಸಂಖ್ಯೆ | ಬಳಗಾನೂರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ) |
|---|---|---|---|---|
| 1 | 7/04 | 60/1ಎ | 1–00 | 2,44,231–00 |
| | **ಒಟ್ಟು** | | | **2,44,231–00** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 17 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 23ನೇ ಜೂನ್ 2012.**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕಿನ ಬಳಗಾನೂರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಬಳಗಾನೂರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ರೂ.2,44,231–00 ಗಳನ್ನು (ಎರಡು ಲಕ್ಷದ ನಲವತ್ತಾಲ್ಕು ಸಾವಿರದ ಇನ್ನೂರ ಮೂವತ್ತೊಂದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.2,44,231/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1746**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/5727, ದಿನಾಂಕ 10/11/2011.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಕೋರಿದ್ದಾರೆ. ಹೆಚ್ಚಿನ ಪರಿಹಾರ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 26/06/1986
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಮ ಘೋಷಿಸಿದ ದಿನಾಂಕ 09/01/1989

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರಿಗೆ ಅರ್ಜಿ ಸಲ್ಲಿಸಿರುತ್ತಾರೆ. ಅದರಂತೆ ವಿಶೇಷ ಭೂಸ್ವಾಧೀನಾಧಿಕಾರಿಗಳು ಎಲ್.ಎ.ಸಿ. ಸಂಖ್ಯೆ:289/99ರಲ್ಲಿ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ಗುಲ್ಬರ್ಗಾ ಇವರ ಆದೇಶದಂತೆ ಪ್ರತಿ ಎಕರೆಗೆ ರೂ.9,900/–ಗಳನ್ನು ನಿಗದಿಪಡಿಸಿರುತ್ತಾರೆ. ಅದರಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕೆ ಚಿಂಚೋಳಿ ಸಿವಿಲ್

ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ.ಸಂಖ್ಯೆ:62/08ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಪ್ರತಿ ಎಕರೆ ಜಮೀನಿಗೆ ರೂ.30,000/–ಗಳ ಭೂಮೌಲ್ಯ ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 1127 ಎಲ್‌ಸಿಜಿ 2010, ದಿನಾಂಕ 31/12/2010ರ ಪತ್ರದಲ್ಲಿ ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಸಾಲೇಬೀರನಹಳ್ಳಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 62/08 | 28/2 | 4–00 | 5,56,212–00 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 166 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 21ನೇ ಜೂನ್ 2012.**

ಗುಲ್ಬರ್ಗಾ ಜಿಲ್ಲೆ, ಚಿಂಚೋಳಿ ತಾಲ್ಲೂಕು ಸಾಲೇಬೀರನಹಳ್ಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಾಲೇಬೀರನಹಳ್ಳಿ ಗ್ರಾಮಕ್ಕೆ ಸೇರಿದ ಸ.ನಂ.28/2ರ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.5,56,212/–ಗಳನ್ನು (ಐದು ಲಕ್ಷದ ಐವತ್ತಾರು ಸಾವಿರದ ಇನ್ನೂರ ಹನ್ನೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಮರುಹೊಂದಾಣಿಕೆ ಅನುದಾನದಿಂದ ರೂ.5,56,212/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1747**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಅಲಗೊಡ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 21/05/2012ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ ಬಿಜೆಪಿ/ಭೂಸ್ವಾಪ್ರ/2012–13/2902.

**ಪ್ರಸ್ತಾವನೆ:**

ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಅಲಗೊಡ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಅಲಗೊಡ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಕೆಳಕಂಡಂತಿದೆ.

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 24/08/2000 ರಂದು ಹೊರಡಿಸಲಾಗಿದೆ.
- ಭೂಸ್ವಾಧೀನಾಧಿಕಾರಿಗಳು ಐತೀರ್ಪು ರಚಿಸಿದ ದಿನಾಂಕ 02/03/2004

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಬಸವಕಲ್ಯಾಣ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:85/07 ಮತ್ತು 86/07ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 02/08/10ರಂದು ನೀಡಿದ ಸಾಮಾನ್ಯ ತೀರ್ಪಿನಲ್ಲಿ ಪ್ರತಿ ಎಕರೆ ಜಮೀನಿಗೆ ರೂ.1,10,000/–ಗಳ ಭೂಮೌಲ್ಯವನ್ನು ನಿಗದಿಪಡಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಅಧಿಕಾರಿ–III, ಕಂದಾಯ ಇಲಾಖೆ (ಎಲ್‌ಎಸಿ) ಇವರು ಪತ್ರ ಸಂಖ್ಯೆ:ಆರ್‌ಡಿ 797 ಎಲ್‌ಸಿಜಿ 2011, ದಿನಾಂಕ 17/04/12ರಂದು ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಇ.ಪಿ. | ಅಲಗೊಡ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 85/07 | 95/10 | 46/1 | 1–00 | 354715 |
| 2 | 86/07 | 96/10 | 46/2 | 2–05 | 753545 |
| | | | | **ಒಟ್ಟು** | **1108260** |

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತದೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 90 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 23ನೇ ಜೂನ್ 2012.**

ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಅಲಗೊಡ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಅಲಗೊಡ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ರೂ.11,08,260–00ಗಳನ್ನು (ಹನ್ನೊಂದು ಲಕ್ಷದ ಎಂಟು ಸಾವಿರದ ಇನ್ನೂರ ಅರವತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.11,08,260/–ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1748** ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಕೋಳೂರು ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ:**

ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/ 1566, ದಿನಾಂಕ: 19/03/2012.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಕೋಳೂರು ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮುದನಾಳ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 19/03/2012ರ ಪತ್ರದಲ್ಲಿ ಕೋರಿರುತ್ತಾರೆ. ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 05/06/1997.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ: 15/07/2000.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಮುದ್ದೇಬಿಹಾಳ ಸಿವಿಲ್ ಜಡ್ಜ್(ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:132/01ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ 03/12/05ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.72,000/–ಗಳ ಭೂಮೌಲ್ಯವನ್ನು ನಿಗದಿಪಡಿಸಿದೆ. ಸಿವಿಲ್ ನ್ಯಾಯಾಲಯದ ತೀರ್ಪಿಗೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಉಚ್ಚ ನ್ಯಾಯಾಲಯದಲ್ಲಿ ಎಂ.ಎಫ್.ಎ.ಸಂಖ್ಯೆ:30387/09ನ್ನು ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ 26/05/11ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.1,60,000/–ಗಳ ಭೂಮೌಲ್ಯವನ್ನು ನಿಗದಿಪಡಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ.

ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಪತ್ರ ಸಂಖ್ಯೆ:ಲಾ 660 ಎಲ್‌ಬಿಎಸ್ 2011, ದಿನಾಂಕ 19/03/12ರಂದು ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ಮುದನಾಳ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 132/01 | 30387/09 | 30/1 | 5–11 | 16,89,780–00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 61 ಭೂಸ್ವಾಪ್ರ 2012 ಬೆಂಗಳೂರು, ದಿನಾಂಕ 21ನೇ ಜೂನ್ 2012.**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಕೋಳೂರು ಗ್ರಾಮದ ಹತ್ತಿರ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮುದನಾಳ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್ ಜಮೀನಿಗೆ ಉಚ್ಚ ನ್ಯಾಯಾಲಯವು ಎಂ.ಎಫ್.ಎ. ಪ್ರಕರಣದಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಮೊತ್ತ ರೂ.16,89,780–00 (ಹದಿನಾರು ಲಕ್ಷದ ಎಂಭತ್ತೊಂಭತ್ತು ಸಾವಿರದ ಏಳುನೂರ ಎಂಭತ್ತು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಮರುಹೊಂದಾಣಿಕೆ ಅನುದಾನದಿಂದ ರೂ.16,89,780/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 1749** ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯಃ-** 2012-13 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಆಡಳಿತ ನಿರ್ವಹಣೆ ಮತ್ತು ಕೇಂದ್ರದ ಕಾರ್ಯಚಟುವಟಿಕೆಗಳ ಅನುಷ್ಠಾನಕ್ಕಾಗಿ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆಃ**

1) ಸರ್ಕಾರಿ ಆದೇಶ ಸಂಖ್ಯೆಃ ವಿಯಇ 58 ವಿತ್ರಮ 2012, ದಿನಾಂಕಃ 05.04.2012.
2) ಸರ್ಕಾರಿ ಆದೇಶ ಸಂಖ್ಯೆ:ವಿಯಇ 1 ಬಉಕೋ 2012, ದಿನಾಂಕ 21.04.2012
3) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಇವರ ಪತ್ರ ಸಂ.KSNDMC/ Budget/270/ 2012-13. ದಿನಾಂಕಃ 17.05.2012.

**ಪ್ರಸ್ತಾವನೆಃ**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ, ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಳನ್ನು 2012-13ನೇ ಸಾಲಿನಲ್ಲಿ ಮುಂದುವರಿಸಿ, 2012-13ನೇ ಸಾಲಿನ ಲೆಕ್ಕಶೀರ್ಷಿಕೆ 3455-00-200-0-01(059)(ಯೋ) ಇದರಡಿಯಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರಕ್ಕೆ(ಕ್ಷಾಮ ನಿರ್ವಹಣಾ ಕೇಂದ್ರ) ಸಹಾಯಾನುದಾನವಾಗಿ ಒಟ್ಟು ರೂ.700.00 ಲಕ್ಷಗಳ ಅನುದಾನವನ್ನು ಆಯವ್ಯಯದಲ್ಲಿ ಕಲ್ಪಿಸಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು 2012-13ನೇ ಸಾಲಿನಲ್ಲಿ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಯ ಸಲುವಾಗಿ ಮೊದಲನೇ ಕಂತಿನ ಅನುದಾನ ರೂ.100.00 ಲಕ್ಷಗಳನ್ನು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆದೇಶದಲ್ಲಿ ಈಗಾಗಲೇ ಬಿಡುಗಡೆ ಮಾಡಲಾಗಿದೆ. ಆದರೆ ಕೇಂದ್ರದ ಕಾರ್ಯಚಟುವಟಿಕೆ ಮತ್ತು ಆಡಳಿತ ನಿರ್ವಹಣೆಗಾಗಿ ಎರಡನೇ ಕಂತಿನ ಅನುದಾನ ತುಂಬಾ ಅವಶ್ಯಕತೆ ಇರುವುದರಿಂದ, ಎರಡನೇ ಕಂತಿನ ಅನುದಾನವಾಗಿ ರೂ.100.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆಃ ವಿಯಇ 1 ಬಉಕೋ 2012, ಬೆಂಗಳೂರು, ದಿನಾಂಕಃ 24.05.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2012-13ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಆಡಳಿತ ನಿರ್ವಹಣೆ ಮತ್ತು ಕೇಂದ್ರದ ಕಾರ್ಯಚಟುವಟಿಕೆಗಳ ಅನುಷ್ಠಾನಕ್ಕಾಗಿ ಎರಡನೇ ಕಂತಿನ ಅನುದಾನವಾಗಿ **ಲೆಕ್ಕಶೀರ್ಷಿಕೆ 3455-00-200-0-01(059)(ಯೋ) ಇದರಡಿಯಲ್ಲಿ** ರೂ.100.00ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು ಮಾತ್ರ) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಮಂಜೂರು ಮಾಡಿದೆ.

1) **ಈ ಮೊತ್ತವನ್ನು 2012-13ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 3455-00-200-0-01 (059) (ಯೋ) ಇದರಡಿಯಲ್ಲಿ ಭರಿಸತಕ್ಕದು,**

2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು. ಇವರು ಸ್ವೀಕೃತ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿ ಅಥವಾ ಪೀಠಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಇವರ ಮೇಲು ರುಜುವಿನೊಂದಿಗೆ ಹಣ ಸೆಳೆಯಬಹುದು.

3) ಈಗ ಬಿಡುಗಡೆ ಮಾಡಿದ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು ಮತ್ತು ಸಂಪೂರ್ಣವಾಗಿ ಉಪಯೋಗ ಮಾಡಿದ ಬಗ್ಗೆ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ದೃಢೀಕರಣದೊಂದಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.

5) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ: 16/05/2008ರನ್ವಯ ಇಲಾಖಾ ಪ್ರಧಾನ ಕಾರ್ಯದರ್ಶಿರವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮದ್ಭಾವಿ ಎ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ(ವಿ&ತಂ)
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 1543**

## ಕಂದಾಯ ಸಚಿವಾಲಯ

**ಸಂಖ್ಯೆ: ಕಂಇ 69 ಮುಆಬಿ 2012 ಬೆಂಗಳೂರು, ದಿನಾಂಕ: 27–06–2012**

### ತಿದ್ದೋಲೆ

ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಎಂಇಟಿ 2003 ದಿನಾಂಕ: 30–04–2003ರ ಮೂಲಕ ಪ್ರಕಟಿಸಲಾದ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿಗೆ ಸಂಬಂಧಿಸಿದಂತೆ ಕ್ರಮ ಸಂಖ್ಯೆ: (53)ರಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| ಹಾಲಿ ಇರುವುದು | ತಿದ್ದುಪಡಿ ಪ್ರಕಾರ ಇರುವುದು |
|---|---|
| ಶ್ರೀ ನಡುಬೈಲು ಕೋಲಾರತಿ ಭೂತಾಲಯ, ಸಜೀಪ ಪಡ್ನೂರು, ಬಂಟ್ವಾಳ ತಾಲ್ಲೂಕು | ಶ್ರೀ ನಡುಬೈಲು ದೈವಗಳು, ಸಜೀಪ ಮೂಡ ಗ್ರಾಮ, ಬಂಟ್ವಾಳ ತಾಲ್ಲೂಕು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ನಾರಾಯಣಪ್ಪ**
ಪೀಠಾಧಿಕಾರಿ
ಕಂದಾಯ ಇಲಾಖೆ (ಮುಜರಾಯಿ)

**ಪಿ.ಆರ್. 1750**

## ಕಂದಾಯ ಸಚಿವಾಲಯ

**ವಿಷಯ:** ಶ್ರೀಮತಿ ಟಿ.ವಿಜಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು ಅವರ ವಿರುದ್ಧ ಶಿಸ್ತು ಕ್ರಮ ಕುರಿತು

**ಓದಲಾಗಿದೆ:** 1) ಉಪ ವಿಭಾಗಾಧಿಕಾರಿ, ಹುಣಸೂರು ಉಪ ವಿಭಾಗ ಅವರ ಪತ್ರ ಸಂಖ್ಯೆ:ಇಎಲ್ಎಲ್ 26/2008–09, ದಿನಾಂಕ:26.04.2008 (ಪುಟ 1)

2) ಜಿಲ್ಲಾಧಿಕಾರಿ, ಮೈಸೂರು ಅವರ ಪತ್ರ ಸಂಖ್ಯೆ:ಇಎಲ್ಎಲ್ (1) 90/2007–08, ದಿನಾಂಕ:27.04.2008 (ಪುಟ 2)

3) ಸರ್ಕಾರಿ ಪತ್ರ ಸಂಖ್ಯೆ:ಕಂಇ 20 ಎಡಿಇ 2008, ದಿನಾಂಕ:03.05.2008(ಪುಟ 5)

4) ಸರ್ಕಾರಿ ಆದೇಶ ಸಂಖ್ಯೆ:ಕಂಇ 20 ಎಡಿಇ 2008, ದಿನಾಂಕ:19.07.2008 (ಪುಟ 24)

5) ಪ್ರಾದೇಶಿಕ ಆಯುಕ್ತರ ಪತ್ರ ಸಂಖ್ಯೆ:ಸಿಸಿಎ ಮಿಸ್ 04/2011–12, ದಿನಾಂಕ:27.01.2012 (ಪುಟ 113)

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಹುಣಸೂರು ಉಪ ವಿಭಾಗಾಧಿಕಾರಿಗಳು ಅವರು ಶ್ರೀಮತಿ ಟಿ.ವಿಜಯ, ತಹಶೀಲ್ದಾರ್, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಶ್ರೀ ಚಿಕ್ಕವೀರನಾಯಕ ಎಂಬುವವರಿಗೆ ಜಾತಿ ದೃಢೀಕರಣ ಪತ್ರ

ನೀಡಿರುವುದು ಹಾಗೂ ಈ ಸಂಬಂಧ ಆಕ್ಷೇಪಣೆ ಸಲ್ಲಿಸಿದ್ದರೂ ಅವುಗಳನ್ನು ಪರಿಶೀಲಿಸದೆ ನೀಡಿರುವುದು ಪೂರ್ವಭಾವಿ ತನಿಖೆಯಿಂದ ದೃಡಪಟ್ಟಿರುವುದಾಗಿ ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(2) ರ ಆದೇಶಲ್ಲಿ ಮೈಸೂರು ಜಿಲ್ಲಾಧಿಕಾರಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10 ರ ಪ್ರಕಾರ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿಟ್ಟು ಆದೇಶಿಸಿರುತ್ತಾರೆ. ಹಾಗೂ ಈ ಅಧಿಕಾರಿಯನ್ನು ಅಮಾನತ್ತಿನಲ್ಲಿಟ್ಟಿರುವ ಕ್ರಮಕ್ಕೆ ಅನುಸಮರ್ಥನೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3) ರ ಪತ್ರದಲ್ಲಿ ಶ್ರೀ ಚಿಕ್ಕವೀರನಾಯಕ ಅವರಿಗೆ ಜಾತಿ ದೃಢೀಕರಣ ಪತ್ರ ನೀಡುವಲ್ಲಿ ಕರ್ತವ್ಯಲೋಪ ಎಸಗಿರುವ ಸಂಬಂಧ ಜಿಲ್ಲಾಧಿಕಾರಿಯವರು ಅಮಾನತ್ತು ಮಾಡಿರುವ ಕ್ರಮಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿ ನೀಡಲಾಗಿದೆ. ಹಾಗೂ ಈ ಅಧಿಕಾರಿ ವಿರುದ್ಧ ಇಲಾಖಾ ವಿಚಾರಣಾ ನಡೆಸಲು ಸೇವಾ ವಿವರಗಳೊಂದಿಗೆ ಅನುಬಂಧ 1 ರಿಂದ 4 ರವರೆಗೆ ದೋಷಾರೋಪಣಾ ಪಟ್ಟಿಗಳನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸಿಕೊಡಲು ಕೋರಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(4) ರ ಆದೇಶದಲ್ಲಿ ಶ್ರೀಮತಿ ಟಿ.ವಿಜಯ, ತಹಶೀಲ್ದಾರ್ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 10(5)(ಸಿ) ರನ್ವಯ ಅವರ ವಿರುದ್ಧ ಶಿಸ್ತು ಕ್ರಮ ಬಾಕಿ ಇರಿಸಿ ಅಮಾನತ್ತು ವಿಖಂಡನೆಗೊಳಿಸಿ ಮೈಸೂರು ಪ್ರಾದೇಶಿಕ ಆಯುಕ್ತರ ಕಛೇರಿಯಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(5) ರ ಮೈಸೂರು ಪ್ರಾದೇಶಿಕ ಆಯುಕ್ತರ ಪತ್ರದಲ್ಲಿ ಶ್ರೀಮತಿ ಟಿ.ವಿಜಯ, ಹಿಂದಿನ ತಹಶೀಲ್ದಾರ್, ಹೆಚ್.ಡಿ.ಕೋಟೆ ಅವರು ಶ್ರೀ ಎಂ.ಸಿ.ದೊಡ್ಡನಾಯಕ, ಶ್ರೀ ಕೆ.ಚಿಕ್ಕವೀರನಾಯಕ ಮತ್ತು ಶ್ರೀ ಚಿಕ್ಕಣ್ಣ ಅವರುಗಳಿಗೆ ದಿನಾಂಕ:25.03.2008 ಮತ್ತು 10.04.2008 ರಲ್ಲಿ ನೀಡಲಾದ ಜಾತಿ ದೃಢೀಕರಣ ಪತ್ರಗಳು ಸಿಂಧು ಎಂದು ಹೆಚ್.ಡಿ.ಕೋಟೆ ತಾಲ್ಲೂಕಿನ ಪ್ರಸ್ತುತ ತಹಶೀಲ್ದಾರ್ ಆದೇಶ ಹೊರಡಿಸಿರುತ್ತಾರೆ. ಆದ್ದರಿಂದ, ಶ್ರೀಮತಿ ಟಿ.ವಿಜಯ ಅವರು ನೀಡಿರುವ ಜಾತಿ ದೃಢೀಕರಣ ಪತ್ರಗಳು ಸಿಂಧುವಾಗಿರುತ್ತದೆ ಎಂದು ತಹಶೀಲ್ದಾರರ ಆದೇಶದ ಛಾಯಾ ಪ್ರತಿಗಳನ್ನು ಅನುಬಂಧಿಸಿ ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಅವಶ್ಯಕತೆ ಇರುವುದಿಲ್ಲವೆಂದು ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಅವರು ತಿಳಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರ ವರದಿ ಹಾಗೂ ಅದರ ದಾಖಲೆಗಳನ್ನು ಪರಿಶೀಲಿಸಿ ಸರ್ಕಾರವು ಆರೋಪಿತ ಅಧಿಕಾರಿಯ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದನ್ನು ಮನಗಂಡು ಅವರ ವಿರುದ್ಧದ ವಿಚಾರಣೆಯನ್ನು ಕೈಬಿಡಲು ನಿರ್ಣಯಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 20 ಎಡಿಇ 2008, ಬೆಂಗಳೂರು, ದಿನಾಂಕ:26-05-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಟಿ.ವಿಜಯ, ಅವರ ವಿರುದ್ಧದ ಆಪಾದನೆಗಳು ದೃಢಪಟ್ಟಿಲ್ಲವಾದ್ದರಿಂದ ಅವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

**ಪಿ.ಆರ್. 1547**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಟಿ.ಎಲ್.ನಾಯಕ್, ಹಿಂದಿನ ತಹಶೀಲ್ದಾರ್, ಹೊಸಕೋಟೆ, (ಪ್ರಸ್ತುತ ನಿವೃತ್ತರು) ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರ ಪತ್ರ ಸಂ: ಇಎಸ್‌ಟಿ (2) ಸಿಸಿಎ:ಸಿಆರ್.26/06-07, ದಿನಾಂಕ: 10-10-2007.
2) ದಿನಾಂಕ: 22-07-2008ರ ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 27 ಎಡಿಇ 2008.
3) ಶ್ರೀ ಟಿ.ಎಲ್.ನಾಯಕ್, ನಿವೃತ್ತ ತಹಶೀಲ್ದಾರ್ ಇವರ ದಿನಾಂಕ:19-11-2008ರ ಲಿಖಿತ ಉತ್ತರ.
4) ಶ್ರೀ ಜಿ.ಸಿ.ರಘುನಾಥ್, ರಾಜಸ್ವ ನಿರೀಕ್ಷಕರು, ನಂದಗುಡಿ ಹೋಬಳಿ, ಪ್ರಸ್ತುತ ಪ್ರ.ದ.ಸ, ತಾಲ್ಲೂಕು ಕಛೇರಿ, ಕನಕಪುರ ಇವರ ದಿನಾಂಕ: 09-03-2009ರ ಲಿಖಿತ ಉತ್ತರ.

5) ಶ್ರೀ ಟಿ.ಮುನಿರಾಜು, ಹಿಂದಿನ ಗ್ರಾಮಲೆಕ್ಕಾಧಿಕಾರಿ,ಕರಪ್ಪನಹಳ್ಳಿ ವೃತ್ತ, ಹೊಸಕೋಟೆ ತಾಲ್ಲೂಕು, ಪ್ರಸ್ತುತ ಗ್ರಾಮಲೆಕ್ಕಾಧಿಕಾರಿ, ಜಾಲಮಂಗಲ ವೃತ್ತ, ಕೊಟಗಲ್ ಹೋಬಳಿ, ರಾಮನಗರ ತಾಲ್ಲೂಕು ಇವರ ದಿನಾಂಕ: 25–06–2009ರ ಲಿಖಿತ ಉತ್ತರ.

6) ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 27 ಎಡಿಇ 2008, ದಿನಾಂಕ:09.10.2009

7) ವಿಚಾರಣಾಧಿಕಾರಿಗಳ ವರದಿ ದಿನಾಂಕ:17.01.2012

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಹೊಸಕೋಟೆ ತಾಲ್ಲೂಕು, ನಂದಗುಡಿ ಹೋಬಳಿ, ಕೆ.ಸತ್ಯವಾರ ಗ್ರಾಮದ ಸರ್ವೆ ನಂ.96 ರಲ್ಲಿ ಅಕ್ರಮವಾಗಿ ದಿನಾಂಕ:26.01.2006 ರಂದು ಗಣರಾಜ್ಯೋತ್ಸವದ ದಿನ 4 ಜನರಿಗೆ ಸಾಗುವಳಿ ಚೀಟಿ ನೀಡುವಾಗ ಕಛೇರಿ ಕೈಪಿಡಿಯಂತೆ ಕಡತವನ್ನು ನಿರ್ವಹಿಸದೇ ತಯಾರಿಸಿದ್ದು, ಸದರಿ ಕಡತದಲ್ಲಿ ಕಛೇರಿ ಟಿಪ್ಪಣಿ, ಪತ್ರವ್ಯವಹಾರ, ಸೀಲಿ, ಸಂಖ್ಯೆ ಇತ್ಯಾದಿ ಇಲ್ಲದೇ ಇದ್ದು ಸ್ವಯಂ ಮಂಜುರಾತಿ ನೀಡಲು ಕೈಗೊಂಡಿರುವುದಲ್ಲದೆ ತಮ್ಮ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು, ಒಂದೇ ದಿನದಲ್ಲಿ ಅರ್ಜಿ ಪಂಚನಾಮೆ, ಅಹವಾಲು ತ:ಖ್ತೆ ಮಹಜರ್ ಕ್ರಮ ಜರುಗಿಸಿ, ಸಾಗುವಳಿ ಚೀಟಿ ವಿತರಿಸಿರುತ್ತಾರೆ. ಅಹವಾಲು ತ:ಖ್ತೆಯನ್ನು ಒಂದೇ ಕುಟುಂಬದ ಸದಸ್ಯರೆಂದು ನಮೂದಿಸಿ, ತಹಶೀಲ್ದಾರ್ ಹಾಗೂ ರಾಜಸ್ವ ನಿರೀಕ್ಷಕರು ಹಾಗೂ ಗ್ರಾಮಲೆಕ್ಕಾಧಿಕಾರಿಗಳು ದುರುದ್ದೇಶದಿಂದ ಸರ್ಕಾರೀ ಜಮೀನು ಅನಧಿಕೃತವಾಗಿ ಖಾತೆ ಮಾಡಲು ಈ ಕೆಳಕಂಡ ಅಧಿಕಾರಿ / ನೌಕರರು ಹೊಣೆಗಾರರಾಗಿರುವುದರಿಂದ ಅವರ ವಿರುದ್ದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 13 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಜಿಲ್ಲಾಧಿಕಾರಿ, ಬೆಂಗಳೂರು ಗ್ರಾಮಾಂತರ ಅವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ಶ್ರೀ ಟಿ.ಎಲ್.ನಾಯಕ್, ತಹಶೀಲ್ದಾರ್, ಹೊಸಕೋಟೆ (ನಿವೃತ್ತ).

2) ಶ್ರೀ ಜಿ.ಸಿ.ರಘುನಾಥ್, ರಾಜಸ್ವ ನಿರೀಕ್ಷಕರು, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು, ಹಾಲಿ ಪ್ರ.ದ.ಸ ತಾಲ್ಲೂಕು ಕಛೇರಿ, ಕನಕಪುರ.

3) ಶ್ರೀ ಟಿ.ಮುನಿರಾಜು, ಗ್ರಾಮಲೆಕ್ಕಿಗರು, ಕರಪ್ಪನಹಳ್ಳಿ ವೃತ್ತ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು, ಹಾಲಿ ಜಾಲಮಂಗಲ ವೃತ್ತ, ರಾಮನಗರ ತಾಲ್ಲೂಕು.

ಸದರಿ ಅಧಿಕಾರಿಯ/ನೌಕರರ ವಿರುದ್ಧ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರವರೆಗೆ) ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನೊಂದಿಗೆ ಜಾರಿಗೊಳಿಸಿ ಆ ಬಗ್ಗೆ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅದಕ್ಕೆ ಉತ್ತರವಾಗಿ, ಶ್ರೀ ಟಿ.ಎಲ್.ನಾಯಕ್, ನಿವೃತ್ತ ತಹಶೀಲ್ದಾರ್, ಶ್ರೀ ಜಿ.ಸಿ.ರಘುನಾಥ್, ರಾಜಸ್ವ ನಿರೀಕ್ಷಕರು, ಹಾಗೂ ಶ್ರೀ ಟಿ.ಮುನಿರಾಜು, ಗ್ರಾಮಲೆಕ್ಕಿಗರು ಇವರು ಮೇಲೆ ಕ್ರ.ಸಂ.(3)(4) ಮತ್ತು (5) ರಲ್ಲಿ ಓದಲಾದ ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧ ಆರೋಪಗಳನ್ನು ಒಪ್ಪಿಕೊಳ್ಳದೆ ಅಲ್ಲಗಳೆದಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(6) ರ ಸದರಿ ಆದೇಶದಲ್ಲಿ ಈ ಆರೋಪಿತ ಅಧಿಕಾರಿ ಹಾಗೂ ನೌಕರರ ವಿರುದ್ಧ ಆರೋಪಗಳು ಹಾಗೂ ಇದಕ್ಕೆ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಠಿಯಿಂದ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರ.ಸಂ.(7) ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಗಳ ವಿರುದ್ದ ಮಾಡಲಾದ ಆರೋಪಗಳು ಯಾವುದು ರುಜುವಾತಾಗಿರುವುದಿಲ್ಲವೆಂದು ಹಾಗೂ ಆರೋಪಿತ ಅಧಿಕಾರಿಗಳನ್ನು ದೋಷಮುಕ್ತರೆಂದು ಘೋಷಿಸಿ ವರದಿಯನ್ನು ನೀಡಿರುತ್ತಾರೆ.

ಇಲಾಖಾ ವಿಚಾರಣಾ ವರದಿ ಹಾಗೂ ಅದರ ದಾಖಲೆಗಳನ್ನು ಪರಿಶೀಲಿಸಿ ಸರ್ಕಾರವು ಆರೋಪಿತರ ವಿರುದ್ದದ ಆರೋಪಗಳು ಸಾಬೀತಾಗಿಲ್ಲದಿರುವುದು ಸ್ಪಷ್ಟವಿರುವುದರಿಂದ ವಿಚಾರಣಾಧಿಕಾರಿ ಅವರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿತರುಗಳ ವಿರುದ್ದ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 27 ಎಡಿಇ 2008, ಬೆಂಗಳೂರು, ದಿನಾಂಕ:26.05.2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಟಿ.ಎಲ್.ನಾಯಕ್, ತಹಶೀಲ್ದಾರ್ (ನಿವೃತ್ತ) ಶ್ರೀ ಜಿ.ಸಿ.ರಘುನಾಥ್, ರಾಜಸ್ವ ನಿರೀಕ್ಷಕರು, ಶ್ರೀ ಟಿ.ಮುನಿರಾಜು, ಗ್ರಾಮಲೆಕ್ಕಿಗರು ಅವರನ್ನು ಮೇಲೆ ಕ್ರ.ಸಂ. (6) ರಲ್ಲಿ ಓದಲಾದ ದಿನಾಂಕ:09.10.2009 ರ ಸರ್ಕಾರಿ ಆದೇಶದಲ್ಲಿ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಿದೆ.

ಆರೋಪಿತ ಅಧಿಕಾರಿ/ನೌಕರರ ವಿರುದ್ಧ ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ನಿಯಮಾನುಸಾರ ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

**ಪಿ.ಆರ್. 1549**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಇವರಿಗೆ ಎರಡು ಮತ್ತು ಮೂರನೇ ವಾರ್ಷಿಕ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಕಂಇ 419 ಎಎಸ್‌ಡಿ 2010, ದಿನಾಂಕ:06.01.2011

2) ಜಿಲ್ಲಾಧಿಕಾರಿ, ಗುಲ್ಬರ್ಗಾ, ಅವರ ಪತ್ರ ಸಂಖ್ಯೆ: ಸಂ/ಕಂ/ಸಿಬ್ಬಂದಿ-2/240/2010-11, ದಿನಾಂಕ: 01.10.2011 ಹಾಗೂ 09/23-12-2011

2) ಮಹಾಲೇಖಪಾಲರು, (A&E) ಕರ್ನಾಟಕ, ಬೆಂಗಳೂರು, ಇವರ ಪತ್ರ ಸಂ: GE I/R5/Vo1-536/2010-11/1849, ದಿನಾಂಕ: 16-03-2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಯವರ ಕಛೇರಿ, ಗುಲ್ಬರ್ಗಾ ಅವರಿಗೆ ಮೊದಲನೆಯ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಜಿಲ್ಲಾಧಿಕಾರಿ, ಗುಲ್ಬರ್ಗಾ, ಅವರ ಪತ್ರದಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಯವರ ಕಛೇರಿ, ಗುಲ್ಬರ್ಗಾ ಅವರಿಗೆ ಎರಡು ಮತ್ತು ಮೂರನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಕುರಿತು ಸದರಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣಾ ಬಾಕಿ ಇರುವುದಿಲ್ಲ. ಆದ್ದರಿಂದ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಪಿ 96, ದಿನಾಂಕ: 18-03-1996 ರನ್ವಯ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ರವರು ದಿನಾಂಕ: 09-09-2010 ರ ಪತ್ರದಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಅವರಿಗೆ ದಿನಾಂಕ:01.12.2010 ರಿಂದ ಎರಡನೇ ವಾರ್ಷಿಕ ಸ್ಥಗಿತ ಬಡ್ತಿಯನ್ನು ಮತ್ತು ದಿನಾಂಕ:01.12.2011 ರಿಂದ ಮೂರನೇ ವಾರ್ಷಿಕ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವುದರ ಬಗ್ಗೆ ತಿಳಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 419 ಎಎಸ್‌ಡಿ 2010, ಬೆಂಗಳೂರು ದಿನಾಂಕ: 25-05-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಅವರಿಗೆ ವೇತನ ಶ್ರೇಣಿ ರೂ.11,400-21,600 ವೇತನ ಶ್ರೇಣಿಯಲ್ಲಿ ದಿನಾಂಕ:01.12.2010 ರಿಂದ ಎರಡನೇ ವಾರ್ಷಿಕ ಸ್ಥಗಿತ ಬಡ್ತಿಯನ್ನು ಮತ್ತು ದಿನಾಂಕ:01.12.2011 ರಿಂದ ಮೂರನೇ ವಾರ್ಷಿಕ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

**ಪಿ.ಆರ್. 1550**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎನ್.ಎಸ್.ಚಿದಾನಂದ, ಹಿಂದಿನ ತಹಶೀಲ್ದಾರ್, ಬೆಳ್ತಂಗಡಿ, ಪ್ರಸ್ತುತ ಬೇಲೂರು ತಾಲ್ಲೂಕು ತಹಶೀಲ್ದಾರ್ ಅವರ ವಿರುದ್ಧ ಕರ್ನಾಟಕ ಮಾಹಿತಿ ಆಯೋಗದ ಆದೇಶದಂತೆ ಶಿಸ್ತು ಕ್ರಮ ಜರುಗಿಸುವ ಬಗ್ಗೆ

**ಓದಲಾಗಿದೆ:** 1) ಪ್ರಾದೇಶಿಕ ಆಯುಕ್ತರ ಪತ್ರ ಸಂಖ್ಯೆ:ಸಿಸಿಎ ಮಿಸ್ 08/2011–12, ದಿನಾಂಕ: 21–09–2011

2) ಕೆ.ಐ.ಸಿ 6 ಎನ್‌ಸಿಸಿ 2010(ಕೆಐಸಿ 8845 ಪಿಟಿಎನ್ 2009)

3) ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್‌ಡಿ 47 2011, ದಿನಾಂಕ:22.11.2011

4) ಶ್ರೀ ಎನ್.ಎಸ್.ಚಿದಾನಂದ, ತಹಶೀಲ್ದಾರ್ ಅವರ ಹೇಳಿಕೆ ದಿನಾಂಕ:15.12.2011

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ: 21–09–2011 ರ ಪತ್ರದಲ್ಲಿಶ್ರೀ ಎನ್.ಎಸ್.ಚಿದಾನಂದ, ತಹಶೀಲ್ದಾರ್, ಬೇಲೂರು, ಹಾಸನ ಜಿಲ್ಲೆ ಅವರು ಈ ಹಿಂದೆ ಬೆಳ್ತಂಗಡಿ ತಹಶೀಲ್ದಾರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಉಂಡೆಮನೆ ನಾರಾಯಣಭಟ್ ಅವರು ಮಾಹಿತಿ ಹಕ್ಕು ಅಧಿನಿಯಮದಡಿ ಮಾಹಿತಿ ಕೋರಿ ಅರ್ಜಿ ಸಲ್ಲಿಸಿದರ ಮೇರೆಗೆ ಅಧಿನಿಯಮದಲ್ಲಿ ನಿಗಧಿಪಡಿಸಿದ ಅವಧಿಯೊಳಗೆ ಅರ್ಜಿದಾರರಿಗೆ ಮಾಹಿತಿ ನೀಡಲು ವಿಳಂಬ ಮಾಡಿದ್ದರಿಂದಾಗಿ ಅರ್ಜಿದಾರರು ಕರ್ನಾಟಕ ಮಾಹಿತಿ ಆಯೋಗಕ್ಕೆ ಮೇಲ್ಮನವಿ ಸಲ್ಲಿಸಿದ್ದರು. ಸದರಿ ಮೇಲ್ಮನವಿ ಬಗ್ಗೆ ವಿಚಾರಣೆ ನಡೆಸಿದ ಮಾನ್ಯ ಆಯೋಗವು ಮಾಹಿತಿ ನೀಡಲು ವಿಳಂಬ ನೀತಿ ಅನುಸರಿಸಿದ ಮತ್ತು ಕರ್ತವ್ಯ ಲೋಪವೆಸಗಿದ ಬೆಳ್ತಂಗಡಿ ತಹಶೀಲ್ದಾರ್ ವಿರುದ್ದ ಶಿಸ್ತು ಕ್ರಮ ಜರುಗಿಸುವಂತೆ ಮಾಹಿತಿ ಆಯೋಗವು ಮೇಲೆ ಓದಲಾದ ಕ್ರ.ಸಂ.(2) ರ ಆದೇಶ ದಿನಾಂಕ:21.04.2010 ರಲ್ಲಿ ಆದೇಶಿಸಲಾಗಿದೆ.

ಶ್ರೀ ಎನ್.ಎಸ್.ಚಿದಾನಂದ, ತಹಶೀಲ್ದಾರ್ ಅವರ ವಿರುದ್ದ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣಾ ಪಟ್ಟಿ ತಯಾರಿಸಿ ಆರೋಪಕ್ಕೆ ಸಂಬಂಧಪಟ್ಟ ದಾಖಲೆಗಳೊಂದಿಗೆ ಜಿಲ್ಲಾಧಿಕಾರಿ, ಮಂಗಳೂರು ಅವರು ಸಲ್ಲಿಸಿದ್ದ ಪ್ರಸ್ತಾವನೆಯನ್ನು ಮೈಸೂರು ವಿಭಾಗದ ಪ್ರಾದೇಶಿಕ ಆಯುಕ್ತರು ಪರಿಷ್ಕರಿಸಿ ಸದರಿ ಅಧಿಕಾರಿ ವಿರುದ್ದ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣ ಪಟ್ಟಿಯೊಂದಿಗೆ ಜಿಲ್ಲಾಧಿಕಾರಿಯವರ ಮೂಲ ಕಡತದೊಂದಿಗೆ ಪ್ರಸ್ತಾವನೆಯನ್ನು ಮೇಲೆ ಓದಲಾದ ಕ್ರ.ಸಂ.(1) ರ ಪತ್ರದಲ್ಲಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3) ರ ಶ್ರೀ ಎನ್.ಎಸ್.ಚಿದಾನಂದ, ತಹಶೀಲ್ದಾರ್ ಅವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957 ರ ನಿಯಮ 11 ರ ಪ್ರಕಾರ ಇಲಾಖಾ ವಿಚಾರಣೆಯನ್ನು ನಡೆಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ (4) ರ ಪತ್ರದಲ್ಲಿ ಅವರ ಹೇಳಿಕೆಯನ್ನು ಸಲ್ಲಿಸುತ್ತಾ ತಮ್ಮ ಕಛೇರಿಯಲ್ಲಿ ಯಾವುದೇ ಮೇಲಾಧಿಕಾರಿಗಳ ಆದೇಶ ಉಲ್ಲಂಘನೆಯಾಗಿಲ್ಲ ಹಾಗೂ ಮಾಹಿತಿ ಆಯೋಗವು ಬೆಳ್ತಂಗಡಿ ತಹಶೀಲ್ದಾರರನ್ನು ಪ್ರತಿವಾದಿಯಾಗಿಲ್ಲ ಹಾಗೂ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಯವರು ಪತ್ರ ಬರೆದು ಸೂಕ್ತ ಎಚ್ಚರಿಕೆಯನ್ನು ನೀಡಿ ಪ್ರಕರಣ ಮುಕ್ತಾಯಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ ಅವರ ಮೇಲಿನ ಆರೋಪದಿಂದ ಮುಕ್ತರನ್ನಾಗಿಸಲು ಕೋರಿರುತ್ತಾರೆ.

ಕರ್ನಾಟಕ ಮಾಹಿತಿ ಆಯೋಗವು ಮಾಹಿತಿ ನೀಡಲು ವಿಳಂಬನೀತಿ ಅನುಸರಿಸಿದ ಮತ್ತು ಕರ್ತವ್ಯಲೋಪ ಎಸಗಿ, ಪುತ್ತೂರು ಉಪ ವಿಭಾಗಾಧಿಕಾರಿಯವರು ಒದಗಿಸಿದ ಮಾಹಿತಿ ಒದಗಿಸಲು ವಿಫಲರಾದ ತಹಶೀಲ್ದಾರರ ವಿರುದ್ದ ಶಿಸ್ತು ಕ್ರಮ ಜರುಗಿಸಲು ಆದೇಶಿಸಿರುವುದನ್ನು ಹಾಗೂ ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಅವರ ಅಭಿಪ್ರಾಯವನ್ನು ಪರಿಶೀಲಿಸಲಾಗಿದೆ. ಶ್ರೀ ಎನ್.ಎಸ್.ಚಿದಾನಂದ ಅವರು ಮಾಹಿತಿಯನ್ನು ವಿಳಂಬವಾಗಿ ಸಲ್ಲಿಸಿರುವುದು ದೃಢಪಟ್ಟಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8(iii) ರಡಿಯಲ್ಲಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 74 ಎಡಿಇ 2011, ಬೆಂಗಳೂರು, ದಿನಾಂಕ:26–05–2012.**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎನ್.ಎಸ್.ಚಿದಾನಂದ, ಹಿಂದಿನ ತಹಶೀಲ್ದಾರ್, ಬೆಳ್ತಂಗಡಿ, ಪ್ರಸ್ತುತ ತಹಶೀಲ್ದಾರ್, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಅವರು ವಿರುದ್ದದ ಆರೋಪ ದೃಢಪಟ್ಟಿರುವುದು ಕಂಡು ಬಂದ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 8(iii) ರನ್ವಯ ಸದರಿಯವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆ ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1552**

## ಕಂದಾಯ ಸಚಿವಾಲಯ

**ವಿಷಯ:–** 2012–13ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :–** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2012–13ನೇ ಸಾಲಿನಲ್ಲಿ ಮುಂಗಾರು ಮಳೆವಿಫಲವಾಗಿ, ರಾಜ್ಯದ 24 ಜಿಲ್ಲೆಗಳ 123 ತಾಲ್ಲೂಕುಗಳಲ್ಲಿ ಬರ ಪರಿಸ್ಥಿತಿ ಉಂಟಾಗಿರುತ್ತದೆ. ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವುಒದಗಿಸುವ ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಹಾವೇರಿ, ಗುಲ್ಬರ್ಗಾ, ಕೊಪ್ಪಳ, ಚಾಮರಾಜನಗರ ಮತ್ತು ಬಿಜಾಪುರ ಜಿಲ್ಲಾಧಿಕಾರಿಗಳು ಪತ್ರಗಳ ಮುಖೇನ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 149 ಟಿಎನ್ಆರ್ 2012, ಬೆಂಗಳೂರು, ದಿನಾಂಕ: 17–05–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲೆ | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಹಾವೇರಿ | 100–00 |
| 2 | ಗುಲ್ಬರ್ಗಾ | 100–00 |
| 3 | ಕೊಪ್ಪಳ | 100–00 |
| 4 | ಚಾಮರಾಜನಗರ | 100–00 |
| 5 | ಬಿಜಾಪುರ | 100–00 |
| | **ಒಟ್ಟು** | **500–00** |

(ರೂಪಾಯಿ ಐದುನೂರು ಲಕ್ಷಗಳುಮಾತ್ರ)

1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ಅನುದಾನವನ್ನು ವೆಚ್ಚ ಮಾಡುವುದು.

2) ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸಮಾಲೋಚಿಸಿ

ಅ) ಕುಡಿಯುವ ನೀರಿನ ವ್ಯವಸ್ಥೆ, ಹಾಗೂ

ಆ) ಜಾನುವಾರುಗಳ ಸಂರಕ್ಷಣೆಗಾಗಿ ಮಾತ್ರ ಅನುದಾನವನ್ನು ಬಳಸುವುದು.

3) ಜಿಲ್ಲಾ ಉಸ್ತುವಾರಿ ಸಚಿವರುಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ

ಪರಿಶೀಲಿಸುವುದು. ಈ ಬಗ್ಗೆ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿರವರುಗಳು ಆಯಾ ಜಿಲ್ಲಾ ಸಚಿವರೊಡನೆ ನಿಕಟ ಸಂಪರ್ಕವಿರಿಸಿಕೊಂಡು ಸಭೆಗಳನ್ನು ಆಯೋಜಿಸಲು ಕ್ರಮ ವಹಿಸುವುದು.

4) ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಜಿಲ್ಲಾ ಮಟ್ಟದ ಸಭೆಗಳನ್ನು ತಿಂಗಳಿಗೊಮ್ಮೆ ನಡೆಸಿ ಬರಪರಿಸ್ಥಿತಿಯ ಬಗ್ಗೆ ಅವಲೋಕನ ಮಾಡುವುದು ಮತ್ತು ಸರ್ಕಾರದಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರು, ಜಾನುವಾರು ಸಂರಕ್ಷಣೆ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವತಿಯಿಂದ ಮಂಜೂರಾಗಿರುವ ಅನುದಾನವನ್ನು ಕುಡಿಯುವ ನೀರಿನ ಯೋಜನೆಗಳು, ಕೊಳವೆ ಬಾವಿ ತೆರೆಯುವುದು ಹಾಗೂ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಸಾಧಿಸುವ ಪ್ರಗತಿಯನ್ನು ವಿಶೇಷವಾಗಿ ಪರಿಶೀಲಿಸುವುದು. ಪ್ರತಿ ತಿಂಗಳ 5ನೇ ತಾರೀಖಿನೊಳಗೆ ಸಭೆಗಳ ನಡವಳಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

5) ಪ್ರತಿ ತಾಲ್ಲೂಕಿನಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿ ಬರಪರಿಹಾರ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯನ್ನೂ ಸೇರಿಸಿದಂತೆ ಕ್ರಿಯಾ ಯೋಜನೆಗಳನ್ನು ಸಿದ್ಧಪಡಿಸಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಸಭೆ ಕರೆದು ಸಿದ್ಧಪಡಿಸಿದ ಹಾಗೂ ಅನುಮೋದಿಸಿದ ಕಾರ್ಯ ಯೋಜನೆಗಳನ್ನು ಯುದ್ಧೋಪಾದಿಯಲ್ಲಿ ಜಾರಿಗೊಳಿಸುವುದು.

6) ಬರಪೀಡಿತ ಪ್ರದೇಶಗಳಿಗೆ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ವ್ಯಾಪಕವಾಗಿ ಪ್ರವಾಸ ಮಾಡುವುದು ಹಾಗೂ ಯಾವುದೇ ಗ್ರಾಮದಲ್ಲಿ ಕುಡಿಯುವ ನೀರು ಹಾಗೂ ಜಾನುವಾರುಗಳಿಗೆ ಸಂಬಂಧಪಟ್ಟ ಸಮಸ್ಯೆಗಳು ಉದ್ಭವವಾಗದಂತೆ ನೋಡಿಕೊಳ್ಳುವುದು. ಬರಪೀಡಿತ ಪ್ರದೇಶದಲ್ಲಿ ಜನರು ಗುಳೇ ಹೋಗುವುದನ್ನು ತಡೆಗಟ್ಟಲು ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕಾಮಗಾರಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಗನುಗುಣವಾಗಿ ಅನುಷ್ಠಾನಗೊಳಿಸುವುದು.

7) ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸಲು ತಾಲ್ಲೂಕಿಗೊಂದು ಸಹಾಯವಾಣಿಯನ್ನು ಸ್ಥಾಪಿಸಿ, ತಾಂತ್ರಿಕ ಸಿಬ್ಬಂದಿಯನ್ನು ನಿಯೋಜಿಸಿ 24 ಗಂಟೆಯೊಳಗಾಗಿ ಕುಡಿಯುವ ನೀರಿನ ಸಮಸ್ಯೆಗಳನ್ನು ಬಗೆಹರಿಸುವುದು.

8) ಪ್ರತಿ 15 ದಿನಗಳಿಗೊಮ್ಮೆ ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯನಿರ್ವಹಕಾಧಿಕಾರಿಗಳು ಜಂಟಿಯಾಗಿ ಬರ ಪರಿಹಾರ ಕಾಮಗಾರಿಗಳ ಬಗ್ಗೆ ಪತ್ರಿಕಾ ಗೋಷ್ಠಿ ನಡೆಸಿ ಮಾಧ್ಯಮಗಳಿಗೆ ಜಿಲ್ಲೆಯಲ್ಲಿ ಕೈಗೊಂಡಿರುವ ಕುಡಿಯುವ ನೀರು, ಜಾನುವಾರು ಸಂರಕ್ಷಣೆ, ಉದ್ಯೋಗ ಖಾತರಿ ಯೋಜನೆ ಮತ್ತು ಬರಪರಿಹಾರಕ್ಕೆ ಸಂಬಂಧಿಸಿದಂತೆ ಸಾಧಿಸಿರುವ ಪ್ರಗತಿಯ ಚಿತ್ರಣವನ್ನು ಬಿಂಬಿಸುವುದು. ಪತ್ರಿಕಾಗೋಷ್ಠಿಯಲ್ಲಿ ಸಿದ್ಧಪಡಿಸಿದ ಟಿಪ್ಪಣಿಯನ್ನು ಇ–ಮೇಲ್ ಮುಖಾಂತರ ಸರ್ಕಾರಕ್ಕೆ ರವಾನಿಸುವುದು. ಇ–ಮೇಲ್ ವಿಳಾಸ ecyrelief-rev@karnataka.gov.in.

9) ಪ್ರತಿ ಹೋಬಳಿಗೆ ಒಬ್ಬ ಜಿಲ್ಲಾ ಮಟ್ಟದ ನೋಡಲ್ ಅಧಿಕಾರಿಯನ್ನು ನೇಮಿಸಿ ಅವರ ಮೂಲಕ ಬರಪರಿಹಾರ ಕಾಮಗಾರಿಗಳು, ಜಾನುವಾರು ಸಂರಕ್ಷಣೆ ಮತ್ತು ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ನಿರ್ವಹಿಸಲಾಗುತ್ತಿರುವ ಕಾಮಗಾರಿಗಳನ್ನು ವ್ಯಾಪಕವಾಗಿ ಪರಿಶೀಲನೆ ಮಾಡುವುದು.

10) ಮುಂದಿನ 2 ತಿಂಗಳುಗಳ ಕಾಲ ಕುಡಿಯುವ ನೀರು/ ಮೇವಿನ ಕೊರತೆ ಹಾಗೂ ಉದ್ಯೋಗಕ್ಕೆ ಕೊರತೆಯುಂಟಾಗದಂತೆ ಹಾಗೂ ಯಾವುದೇ ದೂರುಗಳು ಬರದಂತೆ ಕಾರ್ಯ ನಿರ್ವಹಿಸುವುದು.

11) ಪ್ರತಿಯೊಂದು ಕಾಮಗಾರಿಯ ಆರಂಭ, ಚಾಲ್ತಿಯಲ್ಲಿರುವ ಹಾಗೂ ಮುಕ್ತಾಯದ ಹಂತಗಳ ಛಾಯಾ ಚಿತ್ರಗಳನ್ನು ದಾಖಲಿಸಿ, ಮೂರನೇ ಹಂತದ ಪರಿವೀಕ್ಷಣೆಗೆ ಒಳಪಡಿಸಿ, ಅಂತಿಮ ಬಿಲ್ ಪಾವತಿ ಮಾಡುವುದು

12) ಪೂರ್ಣಗೊಂಡ ಪ್ರತಿಯೊಂದು ಕಾಮಗಾರಿಯ ಛಾಯಾ ಚಿತ್ರಗಳು ಹಾಗೂ ವೆಚ್ಚದ ವಿವರಗಳನ್ನು ಇ–ಮೇಲ್ ಮುಖಾಂತರ (secyrelief-rev@karnataka.gov.in) ಕಳುಹಿಸುವುದು.

13) ಪ್ರತಿಯೊಂದು ಕಾಮಗಾರಿಯ ವಿವರಗಳನ್ನು ಫಲಕದಲ್ಲಿ ಸಾರ್ವಜನಿಕರಿಗೆ ಕಾಣುವಂತೆ ಈ ಕೆಳಕಂಡ ಮಾದರಿಯಲ್ಲಿ ನಮೂದಿಸುವುದು.

**ಪ್ರಕೃತಿ ವಿಕೋಪ ಕಾಮಗಾರಿ**

| | |
|---|---|
| ಕಾಮಗಾರಿಯ ಹೆಸರು: | |
| ಅಂದಾಜು ಮೊತ್ತ: | |
| ಕಾಮಗಾರಿ ಪ್ರಾರಂಭಿಸಿದ ದಿನಾಂಕ: | |
| ಕಾಮಗಾರಿ ಮುಕ್ತಾಯವಾದ ದಿನಾಂಕ: | |
| ಅನುಷ್ಠಾನಗೊಳಿಸಿದ ಸಂಸ್ಥೆ: | |

14) ಪ್ರತಿ ತಿಂಗಳು ಅಂತ್ಯಕ್ಕೆ ಅನುದಾನ ಬಳಕೆಯಾದ ವಿವರಗಳನ್ನು ಮೇಲ್ಕಂಡ ಇ-ಮೇಲ್ ಮುಖಾಂತರ ಸಲ್ಲಿಸುವುದು. ಬಳಕೆ ಪ್ರಮಾಣ ಪತ್ರಗಳನ್ನೂ ಸಹ ತಪ್ಪದೇ ಸರ್ಕಾರಕ್ಕೆ ರವಾನಿಸುವುದು.

15) ಪ್ರತಿ ತಿಂಗಳು ಸಾಧಿಸಿದ ಪ್ರಗತಿಯನ್ನು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳ ಹಾಗೂ ಪ್ರಾದೇಶಿಕ ಆಯುಕ್ತರ ಗಮನಕ್ಕೆ ತರುವುದು ಮತ್ತು ಅವರಿಂದ ಸಲಹೆ-ಸೂಚನೆಗಳನ್ನು ಪಡೆಯುವುದು.

16) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ ಎನ್.ಡಿ.ಆರ್.ಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳುಸುವುದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2245-01-800-1-01-100 (ಯೋಜನೇತರ) ಅಡಿಯಲ್ಲಿ ಭರಿಸುವುದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಇ 392 ವೆಚ್ಚ-7/2012, ದಿನಾಂಕ: 26-04-2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎಂ.ಆನಂದಪ್ಪ**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ,(ವಿಪತ್ತು ನಿರ್ವಹಣೆ)

**ಪಿ.ಆರ್. 1470**

## ಒಳಾಡಳಿತ ಸಚಿವಾಲಯ

**ವಿಷಯ :** ಗೃಹ ಇಲಾಖೆಯ 2012-13ನೇ ಸಾಲಿನ ಮುಂದುವರೆದ ಯೋಜನೆ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಯೋಜನಾ ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂಖ್ಯೆ : ಪಿಡಿ 08 ಐಎಂಎಂ 2012, ದಿನಾಂಕ: 02-04-2012.
2. ಸರ್ಕಾರದ ಪತ್ರ ಸಂಖ್ಯೆ : ಒಇ 26 ಸಶಾಶಾ 2012, ದಿನಾಂಕ: 05-04-2012.
3. ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರ ಪತ್ರ ಸಂಖ್ಯೆ: ಬಿಯುಡಿ- 2/4/2012-13, ದಿನಾಂಕ: 09-04-2012.
4. ನಿರ್ದೇಶಕರು, ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ : **PHC/PM(A)Accts/Plan/Cntn/**2012-13, ದಿನಾಂಕ: 09-04-2012.
5. ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾ ಸಮಾದೇಷ್ಟರು, ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಕಛೇರಿ, ಇವರ ಪತ್ರ ಸಂಖ್ಯೆ : ಲೆಪವಿ(2)5/ಆಯವ್ಯಯ/2012-13, ದಿನಾಂಕ: 09-04-2012.
6. ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಇವರ ಪತ್ರ ಸಂಖ್ಯೆ :ಸೈಕೆಪುಇ/ಎಸ್‌ಆರ್‌ಹೆಚ್/ಎಂಪಿಕ್/2012, ದಿನಾಂಕ: 12-04-2012.
7. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ ಪತ್ರ ಸಂಖ್ಯೆ : ಎಡಿಎಂ1/ಸಿಆರ್-61/2012-13, ದಿನಾಂಕ: 16-04-2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ ಯೋಜನಾ ಇಲಾಖೆಯ ದಿನಾಂಕ: 02-04-2012ರ ಸುತ್ತೋಲೆಯಲ್ಲಿ 2012-13ನೇ ಸಾಲಿಗೆ ಸಂಬಂಧಿಸಿದಂತೆ ಮುಂದುವರೆದ ಯೋಜನೆಗಳನ್ನು ವಿಧಿವಿಧಾನಗಳ ಕುರಿತು ಅನುಷ್ಠಾನಗೊಳಿಸುವ ಬಗ್ಗೆ ನಿಗದಿತ ಅವಧಿಯಲ್ಲಿ ಆದೇಶಗಳನ್ನು ಹೊರಡಿಸುವಂತೆ ಸೂಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಪತ್ರದಲ್ಲಿ ಒಳಾಡಳಿತ ಇಲಾಖೆಯ ಅಧೀನದಲ್ಲಿ ಬರುವ ಕ್ಷೇತ್ರ ಇಲಾಖೆಗಳಿಗೆ 2012-13ನೇ ಸಾಲಿನ ಆರ್ಥಿಕ ಸಾಲಿನ ಆಯವ್ಯಯದಲ್ಲಿ ಆಯಾ ಇಲಾಖೆಗಳಿಗೆ ಸಂಬಂಧಿಸಿದಂತೆ ಯೋಜನೆಯ ಲೆಕ್ಕಶೀರ್ಷಿಕೆ ಅಡಿಯಲ್ಲಿ **(Plan head of Accounts)** ಕಲ್ಪಿಸಿರುವ ಮೊತ್ತಕ್ಕನುಗುಣವಾಗಿ ವಿವರಣಾತ್ಮಕ ಪ್ರಸ್ತಾವನೆಗಳನ್ನು ದಿನಾಂಕ: 09-04-2012ರೊಳಗೆ ಕಳುಹಿಸಿಕೊಡುವಂತೆ ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರಿಂದ (7)ರ ವರೆಗಿನ ಉಲ್ಲೇಖಗಳಲ್ಲಿ ಒಳಾಡಳಿತ ಇಲಾಖೆಯ ಅಧೀನದಲ್ಲಿ ಬರುವ ಕ್ಷೇತ್ರ ಇಲಾಖೆಗಳಿಂದ ಮಾಹಿತಿಯನ್ನು ಪಡೆಯಲಾಗಿದ್ದು, 2012–13ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನಕ್ಕನುಗುಣವಾಗಿ ಮುಂದುವರೆದ ಯೋಜನೆಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಬೇಕಾದ ಪ್ರಸ್ತಾವನೆಗಳನ್ನು ಪರಿಶೀಲಿಸಿದ್ದು, ಅದರಂತೆ ಕೆಳಕಂಡ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 26 ಸಶಾಶ 2012, ಬೆಂಗಳೂರು, ದಿನಾಂಕ: 28–04–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2012–13ನೇ ಹಣಕಾಸಿನ ವರ್ಷದಲ್ಲಿ ಒಳಾಡಳಿತ ಇಲಾಖೆಯ ಆಡಳಿತ ನಿಯಂತ್ರಣಕ್ಕೆ ಒಳಪಡುವ ಈ ಕೆಳಕಂಡ ಕ್ಷೇತ್ರ ಇಲಾಖೆಗಳಿಗೆ ಸಂಬಂಧಿಸಿದಂತೆ, ಸದರಿ ಇಲಾಖೆಗಳಡಿಯಲ್ಲಿ ಸೂಚಿಸಿರುವ ಯೋಜನೆಗಳನ್ನು 2012–13ನೇ ಸಾಲಿನಲ್ಲಿ ಮುಂದುವರೆಸಿ, ಅನುಷ್ಠಾನಗೊಳಿಸಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಿದೆ.

| ಕ್ರಮ ಸಂಖ್ಯೆ | ಯೋಜನೆಯ ವಿವರ | ಲೆಕ್ಕ ಶೀರ್ಷಿಕೆ | 2012–13ನೇ ಸಾಲಿನಲ್ಲಿ ಕಲ್ಪಿಸಿರುವ ಆಯವ್ಯಯದ ವಿವರ (ಲಕ್ಷ ₹. ಗಳಲ್ಲಿ) |
|---|---|---|---|
| 1. | **ಪೊಲೀಸ್ ಇಲಾಖೆ–2055:**<br>**POLICE DEPARTMENT:**<br>13ನೇ ಹಣಕಾಸು ಆಯೋಗದ ಅನುದಾನಗಳು(ಪೊಲೀಸ್ ತರಬೇತಿ) | 2055–00–003–0–06 | 3750–00 |
| | **ಸಂಚಾರ ಸುಧಾರಣೆ (ಬಿ–ಟ್ರ್ಯಾಕ್)**<br>**ಇತರೆ ಖರ್ಚುಗಳು:**<br>ವಿಶೇಷ ಅಭಿವೃದ್ಧಿ ಯೋಜನೆ<br>ಟ್ರೈಬಲ್ ಉಪ ಯೋಜನೆ<br>ಡಿಡಕ್ಟ್ ಎಸ್‌ಸಿಪಿ (SCP)<br>ಡಿಡಕ್ಟ್ ಟಿಎಸ್‌ಪಿ (TSP) | 2055–00–108–0–09 | 2000–00 |
| | ಎನ್.ಎ.ಮುತ್ತಣ್ಣ ಸ್ಮಾರಕ ಶಾಲೆಗೆ (ಸಹಾಯಧನ) | 2055–00–800–0–20 | 100–00 |
| 2. | **ಅಗ್ನಿಶಾಮಕ ಮತ್ತು ತುರ್ತು ಸೇವೆಗಳು:**<br>**FIRE & EMERGENCY SERVICES:**<br>180- ಬೆಂಕಿ ರಕ್ಷಣೆ ಮತ್ತು ನಿಯಂತ್ರಣ (ಯಂತ್ರೋಪಕರಣಗಳು & ಸಾಧನ ಸಾಮಗ್ರಿಗಳು)<br>180-Fire Protection and Control (Machinery equipment) | 2070–00–108–1–01 | 500–00 |
| 3. | **ಕಾರಾಗೃಹಗಳ ಇಲಾಖೆ:**<br>ಕಾರಾಗೃಹಗಳ ನಿರ್ಮಾಣ (ಆಧುನೀಕರಣ)<br>ಬಂಡವಾಳ ವೆಚ್ಚಗಳು<br>(Capital Expenses) | 4059–80–052–0–02–125<br>4059–80–051–0–03–132 | 1000–00<br>300–00 |
| | **KSAFE**<br>132–ಬಂಡವಾಳ ವೆಚ್ಚಗಳು<br>(Capital Expenses)<br>133–ವಿಶೇಷ ಅಭಿವೃದ್ಧಿ ಯೋಜನೆ<br>SDP | 4059–80–051–0–41 | 150–00<br>2000–00 |

| ಕ್ರಮ ಸಂಖ್ಯೆ | ಯೋಜನೆಯ ವಿವರ | ಲೆಕ್ಕ ಶೀರ್ಷಿಕೆ | 2012–13ನೇ ಸಾಲಿನಲ್ಲಿ ಕಲ್ಪಿಸಿರುವ ಆಯವ್ಯಯದ ವಿವರ (ಲಕ್ಷ ₹. ಗಳಲ್ಲಿ) |
|---|---|---|---|
| 4. | **ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ:**<br>**KARNATAKA POLICE HOUSING CORPORATION**<br>ಪೊಲೀಸ್ ವಸತಿ ಗೃಹ (ಹೂಡಿಕೆ) | 4055–00–211–0–01 | 5000–00 |
| | **ಪೊಲೀಸ್ :**<br>ಹುಬ್ಬಳ್ಳಿ–ಧಾರವಾಡ ನಗರದಲ್ಲಿ ಸಶಸ್ತ್ರ ಮೀಸಲು ಪಡೆಯ ಸಿಬ್ಬಂದಿಯ ವಸತಿ ಗೃಹ ನಿರ್ಮಾಣ<br>ಪೊಲೀಸ್ ಠಾಣೆಗಳ ನಿರ್ಮಾಣ | 4055–00–207–0–02<br>4055–00–207–0–04 | 20–00<br>1000–00 |
| 5. | **ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ:**<br>Construction of Rest Houses Aramgruh:<br>ಆರಾಮಗೃಹಗಳ ನಿರ್ಮಾಣ | 4235–60–800–2–01 | 50–00 |
| 6. | **ಹೋಂ ಗಾರ್ಡ್‌ಗಳ ತರಬೇತಿ ಕೇಂದ್ರ ನಿರ್ಮಾಣ** | 4070–00–003–0–01 | 50–00 |

**ಈ ಮೇಲೆ ಸೂಚಿಸಿರುವ ಮುಂದುವರೆದ ಯೋಜನೆಗಳಿಗೆ ಸಂಬಂಧಿಸಿದಂತೆ ಮಂಜೂರಾತಿಯು ಈ ಕೆಳಗೆ ಸೂಚಿಸಿರುವ ಷರತ್ತಿಗಳಿಗೊಳಪಡುತ್ತವೆ.**

1. ಮುಂದುವರಿಸಲಾಗಿರುವ ಯೋಜನೆಗಳನ್ನು ಜಾರಿಗೆ ತರುವಲ್ಲಿ ಯಾವುದೇ ಮೂಲ ಬದಲಾವಣೆ ಮಾಡಕೂಡದು.
2. 2012–13ನೇ ಸಾಲಿನ ಆಯವ್ಯಯದಡಿಯಲ್ಲಿ ಕಲ್ಪಿಸಿರುವ ಅನುದಾನವನ್ನು ಸರ್ಕಾರದ ಆದೇಶಾನುಸಾರ ಬಿಡುಗಡೆ ಮಾಡತಕ್ಕದ್ದು.
3. 2012–13ನೇ ಸಾಲಿನಲ್ಲಿ ಚಾಲ್ತಿಯಲ್ಲಿ ಇಲ್ಲದ ಹೊಸದಾಗಿ ತೆಗೆದುಕೊಳ್ಳುವ ಯೋಜನೆಗಳನ್ನು ಹೊಸ ಯೋಜನೆಗಳೆಂದು ಪರಿಗಣಿಸುವುದು ಮತ್ತು ಇಂತಹ ಪ್ರಸ್ತಾವನೆಗಳನ್ನು ಕಡ್ಡಾಯವಾಗಿ ಯೋಜನೆ ಹಾಗೂ ಆರ್ಥಿಕ ಇಲಾಖೆಯ ಸಹಮತಿಗಾಗಿ ಸರ್ಕಾರಕ್ಕೆ ಕಳುಹಿಸತಕ್ಕದ್ದು.
4. ಮುಂದುವರಿಸಲಾಗಿರುವ ಯೋಜನೆಗಳಲ್ಲಿ ಹೆಚ್ಚುವರಿ ಅಥವಾ ಹೊಸ ಘಟಕ ಹೊಸದಾಗಿ ಹುದ್ದೆಗಳನ್ನು ಸೃಜಿಸುವ ವಾಹನ ಇತ್ಯಾದಿಗಳನ್ನು ಖರೀದಿಸುವ ಪ್ರಸ್ತಾವನೆಗಳು ಇದ್ದಲ್ಲಿ, ಇದನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ರಚಿಸಿರುವ ಅಧಿಕಾರಯುಕ್ತ ಸಮಿತಿಯ ಮುಂದೆ ತರಲು ಅನುವಾಗುವಂತೆ ಸೂಕ್ತ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಇದಲ್ಲದೆ ಮುಂದುವರಿದ ಯೋಜನೆಗಳಲ್ಲಿ ಯಾವುದೇ ಕಾರ್ಯಕ್ರಮವನ್ನು ಹೊಸದಾಗಿ ಅಳವಡಿಸಿ ಅನುಷ್ಠಾನಗೊಳಿಸಲು ಉದ್ದೇಶಿಸುವ ಪ್ರಸ್ತಾವನೆಗಳಿಗೂ ಸಹ ಅಧಿಕಾರಯುಕ್ತ ಸಮಿತಿಯ ಶಿಫಾರಸ್ಸನ್ನು ಪಡೆಯತಕ್ಕದ್ದು.
5. ಆಡಳಿತ ಶಾಖೆ, ಇಲಾಖಾ ಮುಖ್ಯಸ್ಥರು ಹಣ ಬಿಡುಗಡೆ ಮಾಡುವಾಗ ಕರ್ನಾಟಕ ಆರ್ಥಿಕ ಸಂಹಿತೆ ಮತ್ತು ಸಾದಿಲ್ವಾರು ಮೊತ್ತಗಳ ಕೈಪಿಡಿಯಲ್ಲಿರುವ ಅಂಶಗಳನ್ನು ಪಾಲಿಸುವುದು ಮತ್ತು ಉಪಯುಕ್ತತಾ ಪ್ರಮಾಣ ಪತ್ರಗಳನ್ನು ಪಡೆಯುವುದು ಹಾಗೂ ಇತರೆ ನಿಬಂಧನೆಗಳನ್ನು ತಪ್ಪದೆ ಪಾಲಿಸುವುದು.
6. ಇಲಾಖಾ ಮುಖ್ಯಸ್ಥರು ಹಾಗೂ ಸಂಬಂಧಪಟ್ಟ ಆಡಳಿತ ಶಾಖೆಗಳು ಪ್ರತಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಆಯಾ ತಿಂಗಳುಗಳಲ್ಲಿ ಬಿಡುಗಡೆ ಮಾಡಲಾದ ಮೊತ್ತದ ವಿವರಗಳನ್ನು ನಿಗದಿತ ಪ್ರಪತ್ರದಲ್ಲಿ ಮುಂದಿನ ತಿಂಗಳ 10ನೇ ತಾರೀಖಿನೊಳಗಾಗಿ ಆಂತರಿಕ ಆರ್ಥಿಕ ಸಲಹೆಗಾರರಿಗೆ ಒದಗಿಸತಕ್ಕದ್ದು.

**ಎಲ್ಲಾ ಇಲಾಖೆಯ ನೋಡಲ್ ಅಧಿಕಾರಿಗಳು ಎಂಪಿಕ್ ನಮೂನೆಯಲ್ಲಿ ಮಾಹಿತಿಯನ್ನು ಪ್ರತಿ ತಿಂಗಳ 10ನೇ ತಾರೀಖಿನೊಳಗೆ ಯೋಜನೆ, ಗೃಹ ಇಲಾಖೆ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರಿಗೆ ತಪ್ಪದೆ ಸಲ್ಲಿಸುವಂತೆ ಸೂಚಿಸಲಾಗಿದೆ.**

**ಈ ಮೇಲ್ಕಂಡ ನಿಬಂಧನೆಗಳನ್ನು ಎಲ್ಲಾ ಇಲಾಖಾ ಮುಖ್ಯಸ್ಥರು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಹಾಗೂ ಮುಂದುವರೆದ ಯೋಜನೆಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳ ಕುರಿತು ಆಡಳಿತ ಶಾಖೆಗಳು ನಿಯಮಗಳನ್ವಯ ಪರಿಶೀಲಿಸಿ ಹಣ ಬಿಡುಗಡೆಗೆ ಪ್ರತ್ಯೇಕ ಆದೇಶಗಳನ್ನು ಹೊರಡಿಸುವಂತೆ ಸೂಚಿಸಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ.

**ಪಿ.ಆರ್. 1299**

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್. ನಗರ ತಾ॥ ಮೈಸೂರು ಜಿಲ್ಲೆ, ಇದರ 2008–09, 2009–10 ಮತ್ತು 2010–11ನೇ ಸಾಲಿನ ಮಹಾಸಭೆಯನ್ನು 2011–12ನೇ ಸಾಲಿನ ಮಹಾಸಭೆಯೊಂದಿಗೆ ನಡೆಸಲು ಅನುಮತಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಇ 08 ಸಸಕಾ 2010, ದಿನಾಂಕ : 10–01–2011.

2. ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆರವರ ಪತ್ರ ಸಂಖ್ಯೆ : ಎಸ್.ಎಸ್.ಎಸ್.ಎಸ್.ಕೆ/ಎಬಿಎಂ/104/2011–12, ದಿನಾಂಕ : 17–12–2011.
3. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪತ್ರ ಸಂಖ್ಯೆ : ಡಿಎಸ್‌ಕೆ/ಇಎಸ್‌ಟಿಎಸ್/ಜೆಬಿಎಂ/64/2011–12, ದಿನಾಂಕ : 28–01–2012.

**ಪ್ರಸ್ತಾವನೆ:–**

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ, ನಿ., ಚುಂಚನಕಟ್ಟೆ, ಕೆ. ಆರ್. ನಗರ ತಾ॥, ಮೈಸೂರು ಜಿಲ್ಲೆ, ಇದರ 2008–09 ಮತ್ತು 2009–10ನೇ ಸಾಲಿನ ಸರ್ವ ಸದಸ್ಯರ ಮಹಾ ಸಭೆಯನ್ನು 2011ನೇ ಸೆಪ್ಟೆಂಬರ್ ಅಂತ್ಯದೊಳಗೆ ನಡೆಸಲು ಮೇಲೆ ಓದಲಾದ ಕ್ರಮಾಂಕ–(1)ರ ಆದೇಶದಲ್ಲಿ ಅನುಮತಿ ನೀಡಲಾಗಿದೆ.

ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಮೈಸೂರು ಇವರು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬೆಂಗಳೂರು ಇವರಿಗೆ ಸಲ್ಲಿಸಿರುವ ಮೇಲೆ ಓದಲಾದ ಕ್ರಮಾಂಕ–(2)ರ ಪತ್ರದಲ್ಲಿ ಕಾರ್ಖಾನೆಯ ಸುಮಾರು 14,000 ಮಂದಿ ಪೂರ್ಣ ಷೇರು ಹಣ ಪಾವತಿಸಿರುವ ಸದಸ್ಯರಿಗೆ ನೋಟೀಸ್ ನೀಡಲು ಕರುಡು ತಯಾರಿಕೆ, ಮುದ್ರಣ ವ್ಯವಸ್ಥೆ ರವಾನೆ, ಮಹಾಸಭೆಗೆ ವ್ಯವಸ್ಥೆ ಇತ್ಯಾದಿ ವ್ಯವಸ್ಥೆ ಮಾಡಿಕೊಳ್ಳಲು ಮೂರು ತಿಂಗಳ ಕಾಲಾವಕಾಶ ಅವಶ್ಯವಿದ್ದು, ಮಹಾಸಭೆ ನಡೆಸಲು ರೂ. 8–00 ರಿಂದ ರೂ. 10–00 ಲಕ್ಷಗಳು ಬೇಕಾಗಿದ್ದು ಸದರಿ ಮೊತ್ತವನ್ನು ಕಾಯ್ದಿರಿಸಿಕೊಂಡಿರುವುದಿಲ್ಲ, ಈ ಎಲ್ಲಾ ತಯಾರಿಗಳಿಗೆ ಕಾಲಾವಕಾಶ ಅಗತ್ಯವಿರುವುದರಿಂದ ಮೇಲ್ಕಂಡ ಸಾಲುಗಳ ಮಹಾಸಭೆಯನ್ನು ನಡೆಸಲು 2012ನೇ ಸೆಪ್ಟೆಂಬರ್ ಅಂತ್ಯದೊಳಗೆ ನಡೆಸಲು ಆದೇಶ ನೀಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡುವಂತೆ ಕೋರಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬೆಂಗಳೂರು, ಇವರು ಮೇಲೆ ಓದಲಾದ ಕ್ರಮಾಂಕ–(3)ರ ಪ್ರಸ್ತಾವನೆಯಲ್ಲಿ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಇವರ ಶಿಫಾರಸ್ಸಿನಂತೆ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯ ಮೇಲ್ಕಂಡ ವಾರ್ಷಿಕ ಮಹಾ ಸಭೆಗಳನ್ನು 2012ನೇ ಸೆಪ್ಟೆಂಬರ್ ಮಾಹೆಯ ಅಂತ್ಯದೊಳಗೆ ಜರುಗಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 09 ಸಸಕಾ 2012, ಬೆಂಗಳೂರು, ದಿನಾಂಕ: 13–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಚುಂಚನಕಟ್ಟೆ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇದರ 2008–09, 2009–10, 2010–11 ಮತ್ತು 2011–12ನೇ ಸಾಲಿನ ಸರ್ವಸದಸ್ಯರ ಮಹಾಸಭೆಯನ್ನು 2012ನೇ ಸೆಪ್ಟೆಂಬರ್ ಅಂತ್ಯದೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳನ್ನು ಮಾರ್ಪಾಡಿಸಿ ಅನುಮತಿ ನೀಡಲಾಗಿದೆ.

**ಸೂಚನೆ :**–ಪ್ರಕರಣ 27(1)ಕ್ಕೆ ಮಾಡಿದ ಈ ಮರ್ಪಾಡು ದಿನಾಂಕ : 30–09–2012ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ಎಸ್. ರಮಣರೆಡ್ಡಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಪಿ.ಆರ್. 1722**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ|| ಜೆ. ಪ್ರಿಯದರ್ಶಿನಿ, ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ಇವರನ್ನು ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ : ಡಿಪಿಜಿ/ಬೆಂವಿ||/ಕೋ/67/2008–09, ದಿನಾಂಕ : 26–06–2010.
2. ಆಯುಕ್ತರು ಆಕುಕ ಸೇವೆಗಳು, ಬೆಂಗಳೂರು ಪತ್ರ ಸಂಖ್ಯೆ : ಡಿಪಿಜಿ/ಬೆಂವಿ(2)ಕೋ–67, ದಿನಾಂಕ : 19–10–2011.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಪತ್ರದಲ್ಲಿ ಡಾ|| ಜೆ. ಪ್ರಿಯದರ್ಶಿನಿ, ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರು ದಿನಾಂಕ : 07–03–2008ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು ನಂತರ ದಿನಾಂಕ : 10–06–2008ರಿಂದ 03–08–2008 ರವರೆಗೆ ಮತ್ತು 15–08–2008ರಿಂದ 24–08–2008 ರವರೆಗೆ ಹಾಗೂ 27–09–2008 ರಿಂದ ಅನಧಿಕೃತ ಗೈರು ಹಾಜರಾಗಿದ್ದ ಪ್ರಯುಕ್ತ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿಗೊಳಿಸಿದ್ದರೂ ಸಮಜಾಯಿಷಿಯನ್ನು ಸಲ್ಲಿಸದೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಸದರಿ ವೈದ್ಯಾಧಿಕಾರಿಯವರ ಪರಿವೀಕ್ಷಣಾ ಅವಧಿಯನ್ನು ಘೋಷಣೆ ಮಾಡಿಲ್ಲದಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಗಳು 1977ರ ನಿಯಮ 6ರಡಿಯಲ್ಲಿ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಡಾ|| ಜೆ. ಪ್ರಿಯದರ್ಶಿನಿ, ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿದ್ದು, ಅವರ ಸೇವೆಯು ತೃಪ್ತಿಕರವಾಗಿಲ್ಲದೆ ಇರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 181 ಎಂಎಸ್ಎ 2011, ಬೆಂಗಳೂರು, ದಿನಾಂಕ : 13ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ|| ಜೆ. ಪ್ರಿಯದರ್ಶಿನಿ, ಸ್ತ್ರೀರೋಗ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಬಂಗಾರಪೇಟೆ, ಕೋಲಾರ ಜಿಲ್ಲೆ ಇವರು ಖಾಯಂಪೂರ್ವ ಸೇವಾ ಅವಧಿಯಲ್ಲಿ ತೃಪ್ತಿಕರ ಸೇವೆಯನ್ನು ಸಲ್ಲಿಸದೆ ಇರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ ಅವಧಿ) ನಿಯಮಾವಳಿಗಳು 1977ರ ನಿಯಮ 6ರ ಅನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಎಫ್. ಹುಬ್ಬಳ್ಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಪಿ.ಆರ್. 1727**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಲ್. ಎನ್. ಮೋಹನ್ ಕುಮಾರ್, ಅಬಕಾರಿ ಉಪ ಆಯುಕ್ತರು, ಬೆಂಗಳೂರು ನಗರ ಜಿಲ್ಲೆ (ಪೂರ್ವ)ರವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಸಿಟಿ ಕ್ರೈಂ 24/2012 ದಿನಾಂಕ : 27–03–2012.
2. ಅಬಕಾರಿ ಆಯುಕ್ತರ ಪತ್ರ ಸಂಖ್ಯೆ : ಇಸಿಇ/ಬಿಎನ್‌ಜಿ/01/ಡಿಎಸ್ ಸಿ(1)/2012, ದಿನಾಂಕ : 27–03–2012.

ಪ್ರಸ್ತಾವನೆ:–

ಲೋಕಾಯುಕ್ತ ಪೊಲೀಸ್ ವಿಭಾಗದ ತನಿಖಾಧಿಕಾರಿಯು ದಿನಾಂಕ: 22–03–2012 ರಂದು ಬೆಂಗಳೂರು ನಗರ ಜಿಲ್ಲೆಯ ಅಬಕಾರಿ ಉಪ ಆಯುಕ್ತರು (ಪೂರ್ವ) ಇವರ ಕಛೇರಿಯ ಶೋಧನೆ ನಡೆಸಿದ್ದು, ಶ್ರೀ ಎಲ್. ಎನ್. ಮೋಹನ್ ಕುಮಾರ್, ಅಬಕಾರಿ ಉಪ ಆಯುಕ್ತರು ಇವರ ಕಛೇರಿಯ ಆಂಟಿ ಛೇಂಬರ್‌ನಲ್ಲಿ ಶೋಧನೆ ನಡೆಸಿದಾಗ ಒಟ್ಟು ರೂ. 25,200/–ಗಳು ಮತ್ತು 24 ಮದ್ಯದ ಬಾಟಲಿಗಳು ದೊರೆತಿದ್ದು, ಸದರಿ ಅಧಿಕಾರಿಯವರು ಈ ಬಗ್ಗೆ ಸಮರ್ಪಕ ವಿವರಣೆಯನ್ನು ನೀಡಲು ವಿಫಲರಾದ ಕಾರಣ ಸದರಿ ಹಣ ಮತ್ತು ಮದ್ಯದ ಬಾಟಲಿಗಳನ್ನು ವಶಕ್ಕೆ ತೆಗೆದುಕೊಂಡು, ಸದರಿಯವರ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ : 24/2012ರಲ್ಲಿ ಭ್ರಷ್ಟಾಚಾರ ನಿರೋಧಕ ಕಾಯ್ದೆ, 1988ರ ಕಲಂ 13(1),(ಸಿ),(ಡಿ) ಸಹವಾಚನ ಕಲಂ 13 (2) ಹಾಗೂ ಅಬಕಾರಿ ಕಾಯ್ದೆಯ ಕಲಂ 34ಗಳನ್ವಯ ಪ್ರಕರಣವನ್ನು ದಾಖಲಿಸಿದ್ದು, ಆಪಾದಿತ ಅಧಿಕಾರಿಯವರನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಾಗಿಯೂ, ಮಾನ್ಯ ನ್ಯಾಯಾಧೀಶರ ಆದೇಶದಂತೆ ಆಪಾದಿತರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿರುತ್ತದೆಂದು ವರದಿ ಮಾಡಿದ್ದು, ಈ ಆರೋಪಿತರು ದಿನಾಂಕ : 26–03–2012 ರಂದು ನ್ಯಾಯಾಲಯದಿಂದ ಜಾಮೀನು ಪಡೆದುಕೊಂಡಿರುತ್ತಾರೆಂದು ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತರವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಅಧಿಕಾರಿಯವರು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988ರ ಕಲಂ 13(1)(ಸಿ)(ಡಿ) ಸಹವಾಚನ ಕಲಂ 13(2) ಹಾಗೂ ಅಬಕಾರಿ ಕಾಯ್ದೆಯ ಕಲಂ 34 ಗಳನ್ವಯ ಶಿಕ್ಷಾರ್ಹ ಅಪರಾಧವೆಸಗಿರುವುದು ಇದುವರೆವಿಗೂ ದೊರೆತಿರುವ ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದರಿಂದ, ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದಲ್ಲಿ ಹುದ್ದೆಯ ಪ್ರಭಾವ ಬಳಸಿ, ಆರ್ಥಿಕ ಹಾಗೂ ಅಧಿಕಾರ ಬಲದಿಂದ ತನಿಖೆಯಲ್ಲಿ ಹಸ್ತಕ್ಷೇಪ ಮಾಡಿ ತನಿಖೆಯ ಹಾದಿ ತಪ್ಪಿಸುವ ಮತ್ತು ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆಗಳಿರುವುದರಿಂದ ಅವರನ್ನು ತಕ್ಷಣದಿಂದಲೇ ಅಮಾನತ್ತುಗೊಳಿಸಿ ಇವರ ಲೀನ್ (ಸ್ಥಾನ) ಅನ್ನು ಬೇರೆಡೆಗೆ ವರ್ಗಾಯಿಸುವಂತೆ ಕೋರಿದ್ದಾರೆ. ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಅಬಕಾರಿ ಆಯುಕ್ತರು ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಅವರ ಲೀನ್ ಅನ್ನು ಕೊಪ್ಪಳ ಜಿಲ್ಲೆಯಲ್ಲಿ ಖಾಲಿ ಇರುವ ಹುದ್ದೆಗೆ ವರ್ಗಾಯಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು, ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 48 ಇಪಿಎಸ್ 2012, ಬೆಂಗಳೂರು, ದಿನಾಂಕ : 19ನೇ ಮೇ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು, ಶ್ರೀ ಎಲ್. ಎನ್. ಮೋಹನ್ ಕುಮಾರ್, ಅಬಕಾರಿ ಉಪ ಆಯುಕ್ತರು ಬೆಂಗಳೂರು ನಗರ ಜಿಲ್ಲೆ (ಪೂರ್ವ) ಇವರನ್ನು ಸದರಿಯವರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಮೊಕದ್ದಮೆಯಲ್ಲಿನ ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ, ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10 2(ಎ)ರನ್ವಯ ದಿನಾಂಕ : 22–03–2012 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿರಿಸಿದೆ ಹಾಗೂ ಸದರಿಯವರ ಲೀನ್ ಅನ್ನು ಕೊಪ್ಪಳ ಜಿಲ್ಲೆಗೆ ವರ್ಗಾಯಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಲ್. ಎನ್. ಮೋಹನ್ ಕುಮಾರ್, ಅಬಕಾರಿ ಉಪ ಆಯುಕ್ತರು ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಲಭ್ಯವಿರುವ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಈ ಅಮಾನತ್ತಿನ ಅವಧಿಯಲ್ಲಿ ಇವರು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ಎನ್. ವೆಂಕಟಚಲಪತಿ,**

ಸರ್ಕಾರದ ಅಧೀನ ಕಾರ್ಯದರ್ಶಿ

**ಪಿ.ಆರ್. 1499** ಆರ್ಥಿಕ ಇಲಾಖೆ (ಅಬಕಾರಿ)

**ಆರ್ಥಿಕ ಸಚಿವಾಲಯ**

**ವಿಷಯ :** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ

**ಓದಲಾಗಿದೆ :** (1) ಸ.ಆ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2007 ದಿನಾಂಕ : 16–05–2007

(2) ಸ.ಆ. ಸಂಖ್ಯೆ : ಎಫ್‌ಡಿ 19 ಎಸ್‌ಆರ್‌ಪಿ 2007 ದಿನಾಂಕ : 16–05–2007

(3) ಸ.ಆ. ಸಂಖ್ಯೆ : ಎಫ್‌ಡಿ 21 ಎಸ್‌ಆರ್‌ಪಿ 2007 ದಿನಾಂಕ : 28–05–2007

(4) ಸ.ಆ. ಸಂಖ್ಯೆ : ಎಫ್‌ಡಿ 42 ಎಸ್‌ಆರ್‌ಪಿ 2007 ದಿನಾಂಕ : 27–09–2007

(5) ಸ.ಆ. ಸಂಖ್ಯೆ : ಎಫ್‌ಡಿ 03 ಎಸ್‌ಆರ್‌ಪಿ 2008 ದಿನಾಂಕ : 02–04–2008

(6) ಸ.ಆ. ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2008 ದಿನಾಂಕ : 12-11-2008

(7) ಸ.ಆ. ಸಂಖ್ಯೆ : ಎಫ್‌ಡಿ 05 ಎಸ್‌ಆರ್‌ಪಿ 2009 ದಿನಾಂಕ : 19-05-2009

(8) ಸ.ಆ. ಸಂಖ್ಯೆ : ಎಫ್‌ಡಿ 14 ಎಸ್‌ಆರ್‌ಪಿ 2009 ದಿನಾಂಕ : 24-10-2009

(9) ಸ.ಆ. ಸಂಖ್ಯೆ : ಎಫ್‌ಡಿ 14 ಎಸ್‌ಆರ್‌ಪಿ 2010 ದಿನಾಂಕ : 12-04-2010

(10) ಸ.ಆ. ಸಂಖ್ಯೆ : ಎಫ್‌ಡಿ 26 ಎಸ್‌ಆರ್‌ಪಿ 2010 ದಿನಾಂಕ : 29-09-2010

(11) ಸ.ಆ. ಸಂಖ್ಯೆ : ಎಫ್‌ಡಿ 21 ಎಸ್‌ಆರ್‌ಪಿ 2011 ದಿನಾಂಕ : 07-04-2011

(12) ಸ.ಆ. ಸಂಖ್ಯೆ : ಎಫ್‌ಡಿ 35 ಎಸ್‌ಆರ್‌ಪಿ 2011 ದಿನಾಂಕ : 15-10-2011

(13) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಪತ್ರ ಸಂಖ್ಯೆ : ಜಿಇಎ 1689/2011-12, ದಿನಾಂಕ : 23-04-2012

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 17 ಎಸ್ ಆರ್ ಪಿ 2012, ಬೆಂಗಳೂರು, ದಿನಾಂಕ : 14ನೇ ಮೇ 2012**

ಸರ್ಕಾರವು ದಿನಾಂಕ : 1ನೇ ಜನವರಿ 2012 ರಿಂದ ಜಾರಿಗೆ ಬರುವಂತೆ ಮತ್ತು 31ನೇ ಮಾರ್ಚ್ 2012ರ ವರೆಗೆ ರಾಜ್ಯ ಸರ್ಕಾರಿ ನೌಕರರಿಗೆ 2007ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ. 69.5 ರಿಂದ ಶೇ. 76.75ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ. ದಿನಾಂಕ 1ನೇ ಜನವರಿ 2012 ರಂದು ಲಭ್ಯವಿರುವ ಶೇ. 76.75ರಷ್ಟು ತುಟ್ಟಿಭತ್ಯೆಯನ್ನು ಮೂಲ ವೇತನದೊಂದಿಗೆ, 2012ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ದಿನಾಂಕ : 1ನೇ ಏಪ್ರಿಲ್ 2012 ರಿಂದ ವಿಲೀನಗೊಳಿಸಿರುತ್ತದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

3. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

4. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ 2007ರ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಪಡೆಯುವ ವೇತನ ಮತ್ತು ಅದರಲ್ಲಿ.

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

(ಆ) 2007ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ ಸೇರುತ್ತವೆ.

5. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

6. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ,**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು-2)

**ಪಿ.ಆರ್. 1346**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಐಜಿಪಿ ಮತ್ತು ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯನ್ನು ಎಡಿಜಿಪಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯಾಗಿ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 237 ಎಸ್‌ಪಿಎಸ್ 2011, ದಿನಾಂಕ : 01–01–2012.

2. ಅನಧಿಕೃತ ಟಿಪ್ಪಣಿ ಸಂಖ್ಯೆ : ಡಿಪಿಎಆರ್ 47 ಎಸ್ ಪಿಎಸ್ 2012, ದಿನಾಂಕ : 09–05–2012.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ದಿನಾಂಕ : 01–01–2011ರ ಅಧಿಸೂಚನೆಯಲ್ಲಿ ಶ್ರೀ ರಾಘವೇಂದ್ರ ಹೆಚ್. ಔರಾದ್‌ಕರ್, ಐಪಿಎಸ್ (ಕೆಎನ್–87), ಐಜಿಪಿ ಮತ್ತು ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಇವರಿಗೆ ಎಡಿಜಿಪಿ ರ್‍ಯಾಂಕ್‌ಗೆ ಬಡ್ತಿ ನೀಡಿ, ಎಡಿಜಿಪಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯಲ್ಲಿ ಮುಂದುವರೆಸಲಾಗಿದೆ. ಶ್ರೀಯುತರಿಗೆ ಎಡಿಜಿಪಿ ದರ್ಜೆಗೆ ಬಡ್ತಿ ನೀಡಿ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಹುದ್ದೆಯಲ್ಲಿ ಮುಂದುವರೆಸಿರುವುದರಿಂದ, ಸದರಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ದರ್ಜೆಗೆ ಅವಶ್ಯವಾಗಿ ಉನ್ನತೀಕರಿಸಬೇಕಾಗುವುದರಿಂದ, ಐಜಿಪಿ ಮತ್ತು ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯನ್ನು ಎಡಿಜಿಪಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯಾಗಿ ಮೇಲ್ದರ್ಜೆಗೇರಿಸಿ. ಸೂಕ್ತ ಆದೇಶ ಹೊರಡಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 09–05–2012ರ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–4) ಕೋರಿರುತ್ತಾರೆ ಮತ್ತು ಈ ಪ್ರಸ್ತಾವನೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುತ್ತಾರೆಂದು ತಿಳಿಸಿರುತ್ತಾರೆ.

ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 312 ಸಅಸೇ 2012, ಬೆಂಗಳೂರು, ದಿನಾಂಕ : 29ನೇ ಮೇ 2012.**

ಶ್ರೀ ರಾಘವೇಂದ್ರ ಹೆಚ್ ಔರಾದ್‌ಕರ್, ಐಪಿಎಸ್ (ಕೆಎನ್–87), ಐಜಿಪಿ ಮತ್ತು ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಇವರಿಗೆ ಎಡಿಜಿಪಿ ರ್‍ಯಾಂಕ್ ಗೆ ಬಡ್ತಿ ನೀಡಿ ಎಡಿಜಿಪಿ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ ಹುದ್ದೆಯಲ್ಲಿ ಮುಂದುವರೆಸಿರುವುದರಿಂದ, ಸದರಿ ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ದರ್ಜೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ : 10–07–1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಕೆ. ಲಕ್ಷ್ಮೀನಾರಾಯಣರಾವ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

**ಪಿ.ಆರ್. 1540**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ಎನ್. ಮುನಿನಾರಾಯಣ, ಶಾಖಾಧೀಕ್ಷಕರು, ಇವರ ಪರಿಷ್ಕರಣಾ ಮೇಲ್ಮನವಿ ಬಗ್ಗೆ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿಗಳ ಆದೇಶ ಸಂಖ್ಯೆ : ಸಿಬ್ಬಂದಿ (2)/ಶಿಕ್ಷೆ/10/2009, ದಿನಾಂಕ : 02–11–2010.
2. ಮೇಲ್ಮನವಿ ಪ್ರಾಧಿಕಾರದ ಆದೇಶ ಸಂಖ್ಯೆ : ಅಪೀಲು/62/ಪನ್ನಿ/2010–11, ಓಬಿ ಸಂಖ್ಯೆ : 08/2011–12, ದಿನಾಂಕ : 21–04–2011.
3. ಪರಿಷ್ಕರಣ ಮೇಲ್ಮನವಿ ಸಲ್ಲಿಸಿದ ದಿನಾಂಕ : 27–06–2011,
4. ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ದಿನಾಂಕ : 15–03–2012.

**ಪ್ರಸ್ತಾವನೆ:–**

ಶ್ರೀ ಕೆ. ಎನ್. ಮುನಿನಾರಾಯಣ, ಶಾಖಾಧೀಕ್ಷಕರು, ಜಿಲ್ಲಾ ಪೋಲೀಸ್ ಕಛೇರಿ, ಕೆ.ಜಿ.ಎಫ್. ರವರು ಕರ್ತವ್ಯ ನಿರ್ವಹಿಸುತ್ತಿದ್ದಾಗ ಈ ಕೆಳಕಂಡ ಆರೋಪಗಳನ್ನು ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಪೋಲೀಸ್ ಅಧೀಕ್ಷಕರು, ಕೆಜಿಎಫ್ ರವರು ಸದರಿಯವರ ವಿರುದ್ಧ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 12 ರನ್ವಯ ದೋಷಾರೋಪಣೆಯನ್ನು ಹೊರಡಿಸಿರುತ್ತಾರೆ.

"ದಿನಾಂಕ : 04–05–2009 ಮತ್ತು 08–05–2009ರವರೆಗೆ 5 ದಿನಗಳ ಗಳಿಕೆ ರಜೆ ಮಂಜೂರಾತಿಗಾಗಿ ಪೋಲೀಸ್ ಅಧೀಕ್ಷಕರ ಬಳಿ ಚರ್ಚಿಸದೆ, ಕೇವಲ ಸಹಾಯಕ ಆಡಳಿತಾಧಿಕಾರಿಗಳ ಬಳಿ ರಜೆ ಅರ್ಜಿ ಕೊಟ್ಟು ಹೋಗಿರುತ್ತೀರಿ. ಆದಾಗ್ಯೂ ದಿನಾಂಕ : 04–05–2009 ರಿಂದ 05–05–2009 ರವರೆಗೆ ರಜೆ ಮಂಜೂರು ಮಾಡಿ ಕರ್ತವ್ಯಕ್ಕೆ ಬರುವಂತೆ

ತಿಳಿಸಲು ಈ ಕಛೇರಿ ಸಿಬ್ಬಂದಿ ಶ್ರೀ ಎಸ್. ಹರೀಶ್, ದ್ವಿ.ದ.ಸ. ರವರು ದಿನಾಂಕ : 05–05–2009ರಂದು ನಿಮ್ಮಲ್ಲಿ ಬಂದು ತಿಳಿಸಲಾಗಿ ಸದರಿ ರಜೆ ಜ್ಞಾಪನವನ್ನು ಜಾರಿ ಮಾಡಿಕೊಳ್ಳದೆ ತಿರಸ್ಕರಿಸಿ, ಅಣ್ಣನ ಮಗನ ಮದುವೆ ಪ್ರಯುಕ್ತ ಕರ್ತವ್ಯಕ್ಕೆ ಬರಲು ಆಗುವುದಿಲ್ಲವೆಂದು ತಿಳಿಸಿರುತ್ತೀರಿ ಮತ್ತು ಈ ಕಛೇರಿ ಆದೇಶದಂತೆ ನೀವು ದಿನಾಂಕ : 06–05–2009 ರಂದು ಕರ್ತವ್ಯಕ್ಕೆ ಬರಬೇಕಾಗಿದ್ದು. ಬಾರದೆ ದಿನಾಂಕ : 08–05–2009 ರವರೆವಿಗೂ ಕರ್ತವ್ಯಕ್ಕೆ ಗೈರು ಹಾಜರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ, ಬೇಜವಾಬ್ದಾರಿ, ಅಶಿಸ್ತು ಮತ್ತು ದುರ್ನಡತೆಯನ್ನು ತೋರ್ಪಡಿಸಿರುತ್ತಾರೆ.”

ಮೇಲ್ಕಂಡ ಆರೋಪದ ಮೇಲೆ ಆರೋಪಿ ಪೊಲೀಸ್ ಅಧಿಕಾರಿ ರವರ ಸಮಜಾಯಿಷಿಯನ್ನು ಪಡೆದು, ಸಮಜಾಯಿಷಿಯನ್ನು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿ ದಿನಾಂಕ : 02–11–2010ರಲ್ಲಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಒಂದು ತಿಂಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಿ, ದಿನಾಂಕ : 04–05–2009 ರವರೆಗೆ 02 ದಿವಸ ಮಂಜೂರಾಗಿದ್ದ ಗಳಿಕೆ ರಜೆಯನ್ನು ರದ್ದುಗೊಳಿಸಿ, ಕರ್ತವ್ಯಕ್ಕೆ ಗೈರುಹಾಜರಾದ ಅವಧಿಯನ್ನೊಳಗೊಂಡಂತೆ ದಿನಾಂಕ : 04–05–2009 ರಿಂದ 10–05–2009ರ ವರೆಗೆ 07 ದಿವಸ ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಿ, ಆದೇಶಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿ ಅರ್ಜಿಯನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೇಂದ್ರ ವಲಯ, ಬೆಂಗಳೂರು ರವರು ತಿರಸ್ಕರಿಸಿರುತ್ತಾರೆ. ಈ ಎರಡು ಆದೇಶಗಳ ವಿರುದ್ಧ ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಶ್ರೀ ಕೆ. ಎನ್. ಮುನಿನಾರಾಯಣ, ಶಾಖಾಧೀಕ್ಷಕರು ತಮ್ಮ ಸಮಜಾಯಿಷಿಯಲ್ಲಿ ತಮ್ಮ ಸ್ವಂತ ಅಣ್ಣನ ಮದುವೆ ಸಂಬಂಧವಾಗಿ ದಿನಾಂಕ : 04–05–2009 ರಿಂದ 08–05–2009ರ ವರೆಗೆ ಗಳಿಕೆ ರಜೆಯನ್ನಾಗಿ ಮಂಜೂರು ಮಾಡುವಂತೆ ತಮ್ಮ ಹಿರಿಯ ಅಧಿಕಾರಿಯಾದ ಸಹಾಯಕ ಆಡಳಿತಾಧಿಕಾರಿಯವರಿಗೆ ದಿನಾಂಕ : 02–05–2009 ರಂದು ರಜಾ ಅರ್ಜಿ ಪ್ರ.ಪತ್ರದೊಂದಿಗೆ ಸಲ್ಲಿಸಿರುವುದಾಗಿ ದಿನಾಂಕ : 04–05–2009 ರಿಂದ 05–05–2009ರ ವರೆಗೆ 02 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿರುತ್ತದೆ. ಮದುವೆ ಕಾರ್ಯವು ದಿನಾಂಕ : 05–05–2009 ಮತ್ತು 06–05–2009 ಗಳಂದು ಇದ್ದು ವಿನಾಕಾರಣ ಮದುವೆಯ ದಿನದಂದೇ ರಜೆಯನ್ನು ಮಂಜೂರು ಮಾಡದೆ ಅನ್ಯಾಯವನ್ನು ಪೊಲೀಸ್ ಅಧೀಕ್ಷಕರು ಎಸಗಿರುತ್ತಾರೆ. ಆದ್ದರಿಂದ 5 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲು ಮತ್ತು ಒಂದು ತಿಂಗಳ ವಾರ್ಷಿಕ ವೇತನ ಬಡ್ತಿಯನ್ನು ಮುಂದೂಡಿರುವ ಆದೇಶಗಳನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾಸ್ತವಾಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ಹೊರಡಿಸಿರುವ ದಂಡನಾ ಆದೇಶವನ್ನು ಭಾಗಶಃ ಪರಿಷ್ಕರಿಸಲು ನಿರ್ಣಯಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ ಓದಲಾದ (6)ರ ಪತ್ರದಲ್ಲಿ ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 233 ಪೊಸಿಲಿ 2011, ಬೆಂಗಳೂರು, ದಿನಾಂಕ : 23ನೇ ಏಪ್ರಿಲ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 26(ಎ) ಪ್ರಕಾರ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ. ಎನ್. ಮುನಿನಾರಾಯಣ, ಶಾಖಾಧೀಕ್ಷಕರು ಶಿಸ್ತು ಪ್ರಾಧಿಕಾರ ವಿಧಿಸಿದ ಆದೇಶವನ್ನು ಮಾರ್ಪಡಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 8(2)ರನ್ವಯ “ವಾಗ್ದಂಡನೆ” ವಿಧಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಟಿ. ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಪಿ.ಆರ್. 1263**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ಪುನರ್ ರಚಿಸಿ, ಅಧ್ಯಕ್ಷರು, ಪದನಿಮಿತ್ತ ಸದಸ್ಯರು ಮತ್ತು ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರಿ ಆದೇಶ ಸಂಖ್ಯೆ:ವಿಯಇ 70 ವಿತ್ರಮ 2004, ದಿನಾಂಕ:30/07/2005.
2) ಸರ್ಕಾರಿ ಆದೇಶ ಸಂಖ್ಯೆ:ವಿಯಇ 56 ವಿತ್ರಮ 2008, ದಿನಾಂಕ:04/11/2008.
3) ಅಧ್ಯಕ್ಷರು,ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಬೆಂಗಳೂರು. ಇವರ ಪತ್ರ ಸಂಖ್ಯೆ:ಕ.ವಿ.ತಂ.ಅ./ಪುನರ್ ರಚನೆ/2011, ದಿನಾಂಕ:16/11/2011.

ಪ್ರಸ್ತಾವನೆ:–

ಭಾರತ ಸರ್ಕಾರದ ಮಾನ್ಯ ಯೋಜನಾ ರಾಜ್ಯ ಮಂತ್ರಿಗಳು ಬರೆದ ಪತ್ರದನ್ವಯ ಸ್ಪರ್ಧಾ ಪ್ರಪಂಚದಲ್ಲಿ ವಿಜ್ಞಾನ ತಂತ್ರಜ್ಞಾನದ ಬೆಳವಣಿಗೆ ಆಗದಿದ್ದರೆ ಪ್ರಾದೇಶಿಕ ಭಾಷೆಗಳು ಕುಂಠಿತವಾಗುತ್ತದೆ ಅಲ್ಲದೆ ಕನ್ನಡಿಗರ ಜಾಗೃತಿ ಸಮಾವೇಶದಲ್ಲಿ ಖ್ಯಾತ ವಿಮರ್ಶಕರಾದ ಶ್ರೀ ಎಲ್.ಎನ್.ಶೇಷಗಿರಿರಾವ್ ರವರು ವಿಜ್ಞಾನ ಹಾಗೂ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಅಕಾಡೆಮಿಯನ್ನು ರಚಿಸಬೇಕೆಂದು ಹಾಗೂ ಉತ್ತರ ಭಾರತದ ರಾಜ್ಯಗಳು ಈಗಾಗಲೇ ಇಂತಹ ತಂತ್ರಜ್ಞಾನ ಅಕಾಡೆಮಿಯನ್ನು ಸ್ಥಾಪಿಸಿವೆ ಎಂದು ತಿಳಿಸಿ, ಕರ್ನಾಟಕ ರಾಜ್ಯ ಜನತೆಗೆ ರಾಜ್ಯೋತ್ಸವದ ಕೊಡುಗೆಯಾಗಿ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ರಚಿಸುವಂತೆ ಅಂದಿನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಸಚಿವರಾಗಿದ್ದ ಸನ್ಮಾನ್ಯ ಉಪ ಮುಖ್ಯ ಮಂತ್ರಿಗಳನ್ನು ಕೋರಿದ್ದರು. ಅದರಂತೆ ಸನ್ಮಾನ್ಯ ಮುಖ್ಯ ಮಂತ್ರಿಗಳು 2004ರ ನವೆಂಬರ್‌ನಲ್ಲಿ ಕನ್ನಡ ರಾಜ್ಯೋತ್ಸವ ಆಚರಣೆ ಸಂದರ್ಭದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ರಚಿಸಲಾಗುವುದೆಂದು ಘೋಷಿಸಿದ್ದ ಮೇರೆಗೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಸಂಸ್ಥೆಯೊಂದನ್ನು ರಚಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ಪುನರ್ ರಚಿಸಿ ಅಧ್ಯಕ್ಷರನ್ನು ಮತ್ತು ಸದಸ್ಯರುಗಳನ್ನು ನಾಮನಿರ್ದೇಶಿಸಿ 3 ವರ್ಷಗಳ ಅವಧಿಗಾಗಿ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಲಾಗಿದ್ದು, ಇದೀಗ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ, ಇವರು ಅಕಾಡೆಮಿಯ ಕಾರ್ಯಕ್ರಮಗಳಿಗೆ ಇತ್ತೀಚಿಗೆ ಸರ್ಕಾರದಿಂದ ಹೆಚ್ಚಿನ ಪ್ರೋತ್ಸಾಹ ದೊರಕಿರುವುದರಿಂದ ಹಾಗೂ ಅಕಾಡೆಮಿಯ ಸ್ವಂತ ಕಟ್ಟಡವನ್ನು ಸರ್ಕಾರದ ಸಹಾಯದಿಂದ ಪ್ರಸಕ್ತ ಸಾಲಿನಲ್ಲಿ ನಿರ್ಮಿಸಲಿರುವುದರಿಂದ, ಅಕಾಡೆಮಿಯ ಮೂರನೇ ಸದಸ್ಯ ಮಂಡಳಿಯನ್ನು ಆದಷ್ಟು ಬೇಗ ಪುನರಚಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ, ಇಲ್ಲಿಯವರೆಗೆ ಅಕಾಡೆಮಿಯ ಕೆಲಸ ಕಾರ್ಯಗಳಲ್ಲಿ ಹೆಚ್ಚಿನ ಉತ್ಸಾಹ ತೋರಿ ಸಲಹೆ ಸೂಚನೆ ನೀಡಿರುವ ಅಧ್ಯಕ್ಷರು, 4 ಪದನಿಮಿತ್ತ ಸದಸ್ಯರುಗಳನ್ನು ಹಾಗೂ 10 ಸದಸ್ಯರುಗಳನ್ನು ನಾಮನಿರ್ದೇಶಿಸಿ ಶಿಫಾರಸ್ಸು ಮಾಡಿರುವಂತೆ ಅಕಾಡೆಮಿಯನ್ನು ಮುಂದಿನ ಮೂರು ವರ್ಷಗಳ ಅವಧಿಗೆ ಪುನರಚಿಸಿ, ಆದೇಶವನ್ನು ಹೊರಡಿಸಿದರೆ ಅಕಾಡೆಮಿಯ ಧ್ಯೇಯೋದ್ದೇಶಗಳನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ, ಹೆಚ್ಚು ಕಾರ್ಯಕ್ರಮಗಳನ್ನು ಆಯೋಜಿಸಲು ಸಹಕಾರಿಯಾಗುವುದಾಗಿ ತಿಳಿಸಿರುತ್ತಾರೆ.

ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ರಚಿಸಿ, 18 ನಾಮನಿರ್ದೇಶಿತ ಸದಸ್ಯರುಗಳನ್ನೊಳಗೊಂಡಂತೆ 4ನೇ ನವೆಂಬರ್ 2008 ರಿಂದ ಜಾರಿಗೆ ಬರುವಂತೆ ನಾಮನಿರ್ದೇಶಿಸಿ ಮುಂದಿನ ಮೂರು ವರ್ಷಗಳ ಅವಧಿಯವರೆಗೆ ನೇಮಿಸಲಾಗಿತ್ತು. ಸದರಿ ಆದೇಶದ ಪ್ರಕಾರ ಅಕಾಡೆಮಿಯ ಸದಸ್ಯರ ಮೂರು ವರ್ಷಗಳ ಅವಧಿಯು 3ನೇ ನವೆಂಬರ್ 2011ರಂದು ಪೂರ್ಣಗೊಂಡಿರುವುದರಿಂದ, ಅಕಾಡೆಮಿಯನ್ನು ಪುನರ್ ರಚಿಸಿ ಅಧ್ಯಕ್ಷರು ಮತ್ತು ಸದಸ್ಯರುಗಳ ಅವಧಿಯನ್ನು ವಿಸ್ತರಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 207 ವಿತ್ರಮ 2011, ಬೆಂಗಳೂರು, ದಿನಾಂಕ:28/05/2012.**

ಪ್ರಸ್ಥಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಯನ್ನು ಪುನರ್ ರಚಿಸಿ, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿದವರನ್ನು ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಗೆ ಅವರ ಹೆಸರಿನ ಮುಂದೆ ತೋರಿಸಿದಂತೆ ಅಧ್ಯಕ್ಷರು/ಸದಸ್ಯರುಗಳನ್ನು ದಿನಾಂಕ 4ನೇ ನವೆಂಬರ್ 2011ರಿಂದ ವಿಸ್ತರಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಪುನರ್ ನಾಮನಿರ್ದೇಶಿಸಿ ಮುಂದಿನ ಮೂರು ವರ್ಷಗಳ ಅವಧಿಗಾಗಿ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಲಾಗಿದೆ. ಸದರಿ ಅಕಾಡೆಮಿಯ ರಚನೆ, ಕರ್ತವ್ಯಗಳು ಮತ್ತು ಅಧಿಕಾರಗಳು ಸರ್ಕಾರದ ಆದೇಶ ಸಂಖ್ಯೆ: ವಿಯಇ 70 ವಿತ್ರಮ 2004, ದಿನಾಂಕ:30.07.2005ರಲ್ಲಿರುವ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್.ಮದ್ಭಾವಿ**
ಸರ್ಕಾರದ ಅಧೀನ ಕಾರ್ಯದರ್ಶಿ(ವಿ&ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಅನುಬಂಧ–I**

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 207 ವಿತ್ರಮ 2011, ದಿನಾಂಕ:28:05:2012.**

**ಕರ್ನಾಟಕ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿಗೆ ನಾಮನಿರ್ದೇಶಿತಗೊಂಡು ಪುನರ್ ನೇಮಿಸಲ್ಪಟ್ಟ ಅಧ್ಯಕ್ಷರು ಹಾಗೂ ಸದಸ್ಯರುಗಳ ಪಟ್ಟಿ:**

1) **ಪ್ರೊ ಯು.ಆರ್. ರಾವ್,** : **ಅಧ್ಯಕ್ಷರು**
ಮಾಜಿ ಅಧ್ಯಕ್ಷರು, ಇಸ್ರೋ, ಬೆಂಗಳೂರು

2) **ಸರ್ಕಾರದ ಪ್ರಧಾನ ಕಾರ್ಯದರ್ಶಿ** : ಪದನಿಮಿತ್ತ ಸದಸ್ಯರು
ಆರ್ಥಿಕ ಇಲಾಖೆ, ವಿಧಾನಸೌಧ,

3) **ಸರ್ಕಾರದ ಪ್ರಧಾನ ಕಾರ್ಯದರ್ಶಿ** : ಪದನಿಮಿತ್ತ ಸದಸ್ಯರು
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

4) **ಸರ್ಕಾರದ ಪ್ರಧಾನ ಕಾರ್ಯದರ್ಶಿ** : ಪದನಿಮಿತ್ತ ಸದಸ್ಯರು
ಉನ್ನತ ಶಿಕ್ಷಣ ಇಲಾಖೆ
ಬಹುಮಹಡಿಗಳ ಕಟ್ಟಡ, ಬೆಂಗಳೂರು.

5) **ನಿರ್ದೇಶಕರು (ತಾಂತ್ರಿಕ)** : **ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಪದನಿಮಿತ್ತ ಸದಸ್ಯ ಕಾರ್ಯದರ್ಶಿ**
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

6) **ಪ್ರೊ ಎಂ.ಆರ್. ಗಜೇಂದ್ರಗಡ್** : ಸದಸ್ಯರು
ವಿಶ್ರಾಂತ ಕುಲಪತಿಗಳು, ಕುವೆಂಪು ವಿಶ್ವವಿದ್ಯಾನಿಲಯ/
ನಿಸರ್ಗ ಲೇಔಟ್, ಜಿಗಣಿ, ಆನೇಕಲ್ ತಾಲ್ಲೂಕು, ಬೆಂಗಳೂರು–86

7) **ಪ್ರೊ ಜಯಗೋಪಾಲ್ ಉಚ್ಚಿಲ್** : ಸದಸ್ಯರು
ವಿಶ್ರಾಂತ ಪ್ರಾಧ್ಯಾಪಕರು ಮತ್ತು ಅಧ್ಯಕ್ಷರು,
ವಸ್ತು ವಿಜ್ಞಾನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ/
ಬಿ–1579, 'ಆಕಾಂಕ್ಷೆ', ಸಹಕಾರನಗರ, ಬೆಂಗಳೂರು – 92

8) **ಪ್ರೊ ಪಿ.ಎಸ್. ಶಂಕರ್** : ಸದಸ್ಯರು
ನಿರ್ದೇಶಕರು, ಎಂ.ಆರ್. ವೈದ್ಯಕೀಯ ಮಹಾವಿದ್ಯಾಲಯ
'ದೀಪ್ತಿ', ಜಿಲ್ಲಾ ಕೋರ್ಟ್ ಹಿಂಭಾಗ, ಗುಲ್ಬರ್ಗಾ

9) **ಪ್ರೊ ರಾಮಲಿಂಗಯ್ಯ** : ಸದಸ್ಯರು
ನಿರ್ದೇಶಕರು, ಪಿ.ಇ.ಟಿ. ವಿದ್ಯಾಸಂಸ್ಥೆ,
ಕೆ.ಟಿ. 501, 6ನೇ ಮುಖ್ಯರಸ್ತೆ,
ಚಾಮುಂಡೇಶ್ವರಿನಗರ, ಮಂಡ್ಯ

10) **ಪ್ರೊ ಕೆ. ಚಿದಾನಂದಗೌಡ** : ಸದಸ್ಯರು
ವಿಶ್ರಾಂತ ಕುಲಪತಿಗಳು, ಕುವೆಂಪು ವಿಶ್ವವಿದ್ಯಾನಿಲಯ

11) **ಪ್ರೊ. ಗೀತಾ ಬಾಲಿ** : ಸದಸ್ಯರು
ಕುಲಪತಿಗಳು
ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ಬಿಜಾಪುರ

12) **ಡಾ: ಹೆಚ್.ಎಸ್.ನಾಗರಾಜ್,** : ಸದಸ್ಯರು
ಬೇಸ್ ಇನ್ಸ್ಟಿಟ್ಯೂಟ್, ಬೆಂಗಳೂರು.

13) **ಪ್ರೊ ಹಾಲ್ದೊಡ್ಡೇರಿ ಸುಧೀಂದ್ರ** : ಸದಸ್ಯರು
ವಿಜ್ಞಾನ ಸಂವಹನಕಾರರು, ನಿವೃತ್ತ ವಿಜ್ಞಾನಿ
ಜೈನ್ ವಿಶ್ವವಿದ್ಯಾನಿಲಯ, ಬೆಂಗಳೂರು

14) **ಪ್ರೊ ಕಾವೇರಿಯಪ್ಪ** : ಸದಸ್ಯರು
ವಿಶ್ರಾಂತ ಕುಲಪತಿಗಳು, ಮಂಗಳೂರು ವಿಶ್ವವಿದ್ಯಾನಿಲಯ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್.ಮದ್ಭಾವಿ**
ಸರ್ಕಾರದ ಅಧೀನ ಕಾರ್ಯದರ್ಶಿ(ವಿ&ತಂ),
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಪಿ.ಆರ್. 1542**

## ಕಾರ್ಮಿಕ ಸಚಿವಾಲಯ

**ವಿಷಯ:** ವಿಶ್ವ ಬ್ಯಾಂಕ್ ಅನುದಾನಿತ ವೃತ್ತಿ ತರಬೇತಿ ಸುಧಾರಣಾ ಯೋಜನೆಯ ಅಡಿಯಲ್ಲಿ ನೀಡಲಾಗುವ ನವ ಪ್ರವರ್ತನಾ ನಿಧಿಯನ್ನು ಉಪಯೋಗಿಸಿ 60 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ "ಉಪಗ್ರಹ ಮತ್ತು ಬಹುಮಾಧ್ಯಮ ಶಿಕ್ಷಣ" ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಉತನಿ/ತ/ಸಿಒಇ– Innovation/ವಿವ–21/2009–10, ದಿನಾಂಕ 04/01/2012 ಹಾಗೂ ನಂತರದ ಪತ್ರ ವ್ಯವಹಾರಗಳು ಮತ್ತು ಬೆಳವಣಿಗೆಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರಗಳಲ್ಲಿ ವಿಶ್ವ ಬ್ಯಾಂಕ್‌ನ ವೃತ್ತಿ ತರಬೇತಿ ಸುಧಾರಣಾ ಯೋಜನೆ ಸ್ಕೀಂನ ಅಡಿಯಲ್ಲಿ 111.32 ಕೋಟಿ ರೂಪಾಯಿಗಳ ವೆಚ್ಚದಲ್ಲಿ 30 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆಯೆಂದು ಬಹುಕೌಶಲ್ಯ ಕೋರ್ಸುಗಳ ಪರಿಚಯ, ಮುಂದುವರೆದ ಹಾಗೂ ವಿಶೇಷವಾದ ಮಾಡ್ಯುಲ್‌ಗಳು, ಮತ್ತು ಸಾಮೂಹಿಕವಾಗಿ ತಿಳಿಯಪಡಿಸುವುದು ಇತ್ಯಾದಿ ಈ ಯೋಜನೆಯ ಮುಖ್ಯಾಂಶಗಳಾಗಿವೆ ಎಂದು ತಿಳಿಸಿರುತ್ತಾರೆ. ಉತ್ಪಾದನೆ ಮತ್ತು ತಯಾರಿಕೆ, ಎಲೆಕ್ಟ್ರಿಕಲ್, ಆಟೊಮೊಬೈಲ್, ಫ್ಯಾಬ್ರಿಕೇಷನ್ ಮತ್ತು ರೆಫ್ರಿಜರೇಷನ್ ಹಾಗೂ ಏರ್ ಕಂಡಿಷನಿಂಗ್ ಮತ್ತು ಎಲೆಕ್ಟ್ರಾನಿಕ್ಸ್ ವೃತ್ತಿಗಳನ್ನು ರಾಜ್ಯ ಸರ್ಕಾರವು ಈ ಯೋಜನೆಯ ಅಡಿಯಲ್ಲಿ ಒಳಪಡಿಸಿದೆ.

ವಿಶ್ವ ಬ್ಯಾಂಕ್ ಅನುದಾನಿತ ವೃತ್ತಿ ತರಬೇತಿ ಸುಧಾರಣಾ ಯೋಜನೆಯ ಇನ್ನೊಂದು ಮುಖ್ಯ ಉಪ ಅಂಶ ಏನೆಂದರೆ "ಪ್ರವರ್ತನಾ ನಿಧಿ" ಆಗಿದ್ದು, ಇದರ ಅಡಿಯಲ್ಲಿ ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ ರಾಜ್ಯಗಳು ಪಠ್ಯಕ್ರಮವನ್ನು ಅಭಿವೃದ್ಧಿಗೊಳಿಸುವುದಕ್ಕಾಗಿ ಹಾಗೂ ರಾಜ್ಯಾದ್ಯಂತ ವಿಸ್ತರಿಸುವುದಕ್ಕಾಗಿ US$ 1 million (4 ಕೋಟಿ ರೂಪಾಯಿಗಳ) ಅನುದಾನವನ್ನು ಪಡೆಯಲು ಅರ್ಹವಾಗುತ್ತವೆ. ಉಳಿದ ಅನುದಾನವನ್ನು ರಾಜ್ಯ ಸರ್ಕಾರಗಳು ಭರಿಸಬೇಕಾಗುತ್ತದೆ. ರಾಜ್ಯ ಸರ್ಕಾರವು 158 ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ನಡೆಸುತ್ತಿದ್ದು, ಹಳೆ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳೊಂದಿಗೆ ಹೋಲಿಸಿದಾಗ ಹೊಸ ಸಂಸ್ಥೆಗಳಲ್ಲಿ ಮೂಲಭೂತ ಸೌಲಭ್ಯ, ಯಂತ್ರೋಪಕರಣ ಮತ್ತು ಪರಿಣಿತ ಬೋಧಕ ಸಿಬ್ಬಂದಿಗಳ ಕೊರತೆ ಇದ್ದು, ಇವುಗಳನ್ನು ಬಲಪಡಿಸುವ ನಿಟ್ಟಿನಲ್ಲಿ ವಿಶ್ವ ಬ್ಯಾಂಕ್ ಅನುದಾನಿತ ವೃತ್ತಿ ತರಬೇತಿ ಸುಧಾರಣಾ ಯೋಜನೆಯ ಅಡಿ ನೀಡಲಾಗುವ ನವಪ್ರವರ್ತನಾ ನಿಧಿಯನ್ನು ಉಪಯೋಗಿಸಿ 60 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ "ಉಪಗ್ರಹ ಮತ್ತು ಬಹುಮಾಧ್ಯಮ ಶಿಕ್ಷಣ" ಯೋಜನೆಯನ್ನು ಅನುಷ್ಠಾಗೊಳಿಸಲು ಉದ್ದೇಶಿಸಲಾಗಿದೆ. ಈ ಯೋಜನೆಯ ಉಪಯೋಗಗಳು ಈ ಕೆಳಗಿನಂತಿವೆ.

1. ಪ್ರತಿಸ್ಪಂದನಾ ತಂತ್ರಾಂಶಗಳನ್ನು ಬಳಸಿ ಉಪಗ್ರಹ ಆಧಾರಿತ ನೇರಪ್ರಸಾರದ ತರಗತಿಗಳನ್ನು ನಡೆಸುವುದು, ಸ್ಟುಡಿಯೋಗಳ ಮೂಲಕ ಹಾಗೂ ಕೈಗಾರಿಕಾ ಪ್ರದೇಶಗಳ ಮೂಲಕ ಪ್ರಾಯೋಗಿಕ ಪ್ರದರ್ಶನಗಳ ನೇರಪ್ರಸಾರ.
2. ದೂರದಲ್ಲಿರುವ ತಜ್ಞ ತರಬೇತಿದಾರರು ಹಾಗೂ ಕೈಗಾರಿಕಾ ತಜ್ಞರಿಂದ ದೂರ ಸಂಪರ್ಕದ ಮೂಲಕ ಉತ್ತಮ ಗುಣಮಟ್ಟದ ಬೋಧನೆ.
3. ಇ–ಕಲಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನದ ಸೌಲಭ್ಯ.
4. ಬೆಲೆಬಾಳುವ ಯಂತ್ರೋಪಕರಣಗಳ ನಿರ್ವಹಣೆ ಹಾಗೂ ಅದರ ಉಪಯೋಗದ ಬಗ್ಗೆ ಮಾಹಿತಿಯನ್ನು ವಿದ್ಯಾರ್ಥಿಗಳಿಗೆ ದೂರಸಂಪರ್ಕದ ಮೂಲಕ ಬೋಧಿಸುವುದು.
5. ದೇಶದಾದ್ಯಂತ ಹಾಗೂ ಹೊರ ದೇಶಗಳಲ್ಲಿ ಲಭ್ಯವಿರುವ ಪೂರ್ವತಯಾರಿತ ವಿಷಯಗಳನ್ನು 60 ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳಿಗಾಗಿ ಪ್ರಸಾರಗೊಳಿಸುವುದು.
6. ಈ ಯೋಜನೆಯ ಮೂಲಭೂತ ಸೌಲಭ್ಯಗಳನ್ನು ತಂತ್ರಾಂಶ ಕೌಶಲ್ಯ ತರಬೇತಿಗೆ ಹಾಗೂ ಆಂತರಿಕ ವ್ಯಕ್ತಿತ್ವ ಬೆಳವಣಿಗೆ ಮತ್ತು ವೃತ್ತಿ ಮಾರ್ಗದರ್ಶನ ತರಬೇತಿಗೆ ಬಳಸಿಕೊಳ್ಳುವುದು.

ಈ ಯೋಜನೆಯನ್ನು ಕಿಯೋನಿಕ್ಸ್ ಸಂಸ್ಥೆಯು ಅಭಿವೃದ್ಧಿಪಡಿಸಿದೆ. ಹಾಗೂ ಇದನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಯ ಮುಂದಿನ ಅಗತ್ಯತೆಗಳಿಗೆ ಬಳಸಿಕೊಳ್ಳಬಹುದಾಗಿದೆ. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್ 226 ವೆಚ್ಚ 12/11 ದಿನಾಂಕ: 29/04/2011ರ ಮೂಲಕ ರಾಜ್ಯ ಸರ್ಕಾರದ ಸ್ವಾಯತ್ತ ಸಂಸ್ಥೆಯಾದ ಕಿಯೋನಿಕ್ಸ್‌ಗೆ ಕೆಟಿಪಿಪಿ ಅಧಿನಿಯಮ 1999ರ ಕಲಂ 4(ಜಿ) ಅಡಿ ವಿನಾಯಿತಿಯನ್ನು ನೀಡಲಾಗಿದ್ದು, ಈ ವಿನಾಯಿತಿಯು 24/03/2011ರಿಂದ ಒಂದು ವರ್ಷದ ಅವಧಿಯ ತನಕ ಇರುತ್ತದೆ. ಈ ಯೋಜನೆಗೆ ಬೇಕಾಗುವ ಉಪಕರಣಗಳನ್ನು ಹಾಗೂ ಸೇವೆಯನ್ನು ಈ ಸಂಸ್ಥೆಯಿಂದ ಪಡೆಯಲಾಗುವುದು.

ಈ ಯೋಜನೆಯನ್ನು 60 ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ 2012–13ನೇ ಸಾಲಿನಿಂದ 2016–17ನೇ ಸಾಲಿನವರೆಗೆ ಒಟ್ಟು ರೂ. 1122.10 ಲಕ್ಷಗಳ ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ. ಪ್ರಾರಂಭಿಕ ಬಂಡವಾಳ ವೆಚ್ಚ ರೂ. 214.74 ಲಕ್ಷಗಳು ಹಾಗೂ ಡಿಸೆಂಬರ್ 2012ರವರೆಗೆ ಭಾಗಾಂಶ ಕಾರ್ಯಾಚರಣೆ ವೆಚ್ಚ ರೂ. 146.61 ಲಕ್ಷಗಳು ಹೀಗೆ ಒಟ್ಟು 361.35 ಲಕ್ಷ ರೂಪಾಯಿಗಳ ವೆಚ್ಚವನ್ನು ವಿಶ್ವಬ್ಯಾಂಕ್ / ಕೇಂದ್ರ ಸರ್ಕಾರದ ಸಹಾಯದಿಂದ ಭರಿಸಲಾಗುವುದು. 2012ರಿಂದ 2017ರವರೆಗೆ ಬೇಕಾಗಬಹುದಾದ ರೂ. 760.75 ಲಕ್ಷಗಳನ್ನು ಯೋಜನೆಯಡಿ ಒದಗಿಸಲಾಗುವ ಆಯವ್ಯಯದಿಂದ ಭರಿಸಲು ಉದ್ದೇಶಿಸಲಾಗಿದೆ.

ಈ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ 210 ವೆಚ್ಚ.9/2012 ಆರ್.ಎಫ್. 55978, ದಿನಾಂಕ 03/05/2012ರಲ್ಲಿ ಸಚಿವ ಸಂಪುಟದ ಅನುಮೋದನೆಯನ್ನು ಪಡೆಯತಕ್ಕದ್ದು ಎಂದು ತಿಳಿಸುತ್ತಾ, ಸಹಮತಿಯನ್ನು ನೀಡಿರುತ್ತದೆ. ಈ ಯೋಜನೆಯ ಅನುಷ್ಠಾನ ಕುರಿತು ರಾಜ್ಯ ಸರ್ಕಾರದ ಒಪ್ಪಿಗೆಯ ನಂತರವೇ ಕೇಂದ್ರ ಸರ್ಕಾರವು ಈ ಯೋಜನೆಗೆ ಅನುದಾನವನ್ನು ಬಿಡುಗಡೆ ಮಾಡುತ್ತಾರೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಆದೇಶವನ್ನು ಹೊರಡಿಸಿ ತದನಂತರ ಘಟನೋತ್ತರ ಅನುಮೋದನೆಗಾಗಿ ಸಚಿವ ಸಂಪುಟದ ಮುಂದೆ ಮಂಡಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 163 ಇಟಿಐ 2011 ಬೆಂಗಳೂರು, ದಿನಾಂಕ: 20/06/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ 60 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ "ಉಪಗ್ರಹ ಮತ್ತು ಬಹುಮಾಧ್ಯಮ ಶಿಕ್ಷಣ" ಯೋಜನೆಯನ್ನು 2012–13ನೇ ಸಾಲಿನಿಂದ 2016–17ನೇ ಸಾಲಿನವರೆಗೆ ಒಟ್ಟು ₹ 1122.10 ಲಕ್ಷ (ಹನ್ನೊಂದು ಕೋಟಿ ಇಪ್ಪತ್ತೆರಡು ಲಕ್ಷದ ಹತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಅಲ್ಲದೇ, ಪ್ರಾರಂಭಿಕ ಬಂಡವಾಳ ವೆಚ್ಚ ₹ 214.74 ಲಕ್ಷ(ಎರಡು ಕೋಟಿ ಹದಿನಾಲ್ಕು ಲಕ್ಷದ ಎಪ್ಪತ್ತಾಲ್ಕು ಸಾವಿರ ರೂಪಾಯಿಗಳು ಮಾತ್ರ)ಗಳು ಮತ್ತು ಡಿಸೆಂಬರ್ 2012ರವರೆಗೆ ಭಾಗಂಶ ಕಾರ್ಯಾಚರಣೆ ವೆಚ್ಚ ₹ 146.61 ಲಕ್ಷ(ಒಂದು ಕೋಟಿ ನಲವತ್ತಾರು ಲಕ್ಷದ ಅರವತ್ತೊಂದು ಸಾವಿರ ರೂಪಾಯಿಗಳು ಮಾತ್ರ)ಗಳು ಅಂದರೆ ಒಟ್ಟು ₹ 361.35 ಲಕ್ಷ(ಮೂರು ಕೋಟಿ ಅರವತ್ತೊಂದು ಲಕ್ಷದ ಮೂವತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳ ವೆಚ್ಚವನ್ನು ವಿಶ್ವಬ್ಯಾಂಕ್ / ಕೇಂದ್ರ ಸರ್ಕಾರದ ಸಹಾಯದಿಂದ ಭರಿಸಲು ಮಂಜೂರಾತಿ ನೀಡಿದೆ. ರಾಜ್ಯ ಸರ್ಕಾರದ ಪಾಲು ₹ 760.75 ಲಕ್ಷ (ಏಳು ಕೋಟಿ ಅರವತ್ತು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳ ಆವರ್ತಕ ಕಾರ್ಯಾಚರಣೆ ಮತ್ತು ನಿರ್ವಹಣಾ ವೆಚ್ಚವನ್ನು ಉದ್ಯೋಗ ಮತ್ತು ತರಬೇತಿ ಇಲಾಖೆಗೆ 2012ರಿಂದ 2017ರ ಸಾಲಿನಲ್ಲಿ ಯೋಜನೆ ಅಡಿ ಒದಗಿಸಲಾಗುವ ಆಯವ್ಯಯದಲ್ಲಿ ಭರಿಸಲು ಸಹ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 210 ವೆಚ್ಚ.9/2012 ಆರ್.ಎಫ್. 55978, ದಿನಾಂಕ 03/05/2012ರಲ್ಲಿ ನೀಡಿರುವ ಸಹಮತಿಯನ್ವಯ ಮತ್ತು ಸಚಿವ ಸಂಪುಟದ ಘಟನೋತ್ತರ ಅನುಮೋದನೆಯನ್ನು ಪಡೆಯುವ ಷರತ್ತಿಗೆ ಒಳಪಟ್ಟು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಎಸ್.ವಿಶ್ವನಾಥಪ್ಪ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ,

(ಉದ್ಯೋಗ ಮತ್ತು ತರಬೇತಿ)

**ಪಿ.ಆರ್. 1723**

## COMMERCE & INDUSTRIES SECRETARIAT

**Sub :** Approval to the Project Proposal of M/s. Kolhar Canes Pvt. Ltd. to establish a “3500 TCD Crystal sugar, 27 MW Co-Gen & 60 KLPD Distillery Plant” at Bagewadi, Bijapur District.

**Read :** Proceedings of the 28th State High Level Clearance Committee (SHLCC) Meeting held on 23.05.2012.

**PREAMBLE:**

M/s. Kolhar Canes Pvt. Ltd. has proposed to establish a "3500 TCD Crystal sugar, 27 MW Co-Gen & 60 KLPD Distillery Plant" at Bagewadi, Bijapur District, with an investment of Rs.225.18 Crores, generating employment to about 97 persons.

In the 28th State High Level Clearance Committee (SHLCC) Meeting held on 23.05.2012, the proposal of the Company was discussed and approved.

Government has examined the recommendations made by the State High Level Clearance Committee in the 28th Meeting held on 23.05.2012, in all aspects.

Hence the following order.

**GOVERNMENT ORDER NO: CI 176 SPI 2012, BANGALORE DATED: 25TH MAY 2012**

Government is pleased to accord in principle approval to the Project Proposal of M/s Kolhar Canes Pvt. Ltd. to establish a "3500 TCD Crystal sugar, 27 MW Co-Gen & 60 KLPD Distillery Plant" at Bagewadi, Bijapur District, with an investment of Rs.225.18 Crores, generating employment to about 97 persons and extend the following infrastructure facilities, incentives & concessions.

**INFRASTRUCTURE FACILITIES:**

| | | |
|---|---|---|
| **1.** | **Land:** | 135.00 acres of land at at Sy.No.216/1, 221/2, 220/2, 220/3, 216/2, 220/1, 219, 218, 215, 227/1, 227/2, 227/3, 227/4 of Telagi Village and Sy.Nos.141/1, 141/2, 142, 143 of Angadageri Villages of Basvana Bagewadi, Bijapur District, to be acquired as SUC, by KIADB. Promoters to obtain consent from 70% of the farmers. |
| **2.** | **Water:** | The project proponent directed to make separate application to WRD. |
| **3.** | **Power:** | 700 KVA to be supplied by HESCOM |
| **4.** | **Incentives & Concessions:** | As per applicable Industrial Policy of the State. |

**GENERAL TERMS AND CONDITIONS :**

1. **Environment:** Promoters to obtain CFE from KSPCB. Environmental Clearance from MOEF, GOI / DFEE GOK as applicable.

2. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka (Dr. Sarojini Mahishi report). A copy of Human Resources Development plan shall be sent to the Commissioner for I.D. & Director of Industries and Commerce for monitoring.

3. **Vendor Development:** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

4. **Social Infrastructure Development: The** Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

5. **Others:**

   a) Project proponent to give employment to the family members of the land losers, one for each family as far as possible.

   b) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.

   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of land allotment by KIADB.

By Order and in the name of the Governor of Karnataka,

**JYOTHI R.J**

**PR-1751**

Desk Officer (Technical Cell)

Commerce & Industries Department.

## COMMERCE & INDUSTRIES SECRETARIAT

**Sub:** Approval to the Project Proposal of M/s. Infosys Ltd. to establish an "IT/ITES SEZ" at IT/BT Park, Near BIAL, Bangalore Urban District.

**Read:** Proceedings of the 28th State High Level Clearance Committee (SHLCC) Meeting held on 23.05.2012.

**PREAMBLE:**

M/s. Infosys Ltd. has proposed to establish an "IT/ITES SEZ" at IT/BT Park, Near BIAL, Bangalore Urban District, with an investment of Rs.595.00 Crores, generating employment to about 8000 persons.

In the 28th State High Level Clearance Committee (SHLCC) Meeting held on 23.05.2012, the proposal of the Company was discussed and approved.

Government has examined the recommendations made by the State High Level Clearance Committee in the 28th Meeting held on 23.05.2012, in all aspects.

Hence the following order.

**GOVERNMENT ORDER NO: CI 178 SPI 2012, BANGALORE DATED: 25TH MAY 2012**

Government is pleased to accord in principle approval to the Project Proposal of M/s Infosys Ltd. to establish an "IT/ITES SEZ" at IT/BT Park, Near BIAL, Bangalore Urban District, with an investment of Rs.595.00 Crores, generating employment to about 8000 persons and extend the following infrastructure facilities, incentives & concessions.

**INFRASTRUCTURE FACILITIES:**

1. **Land:** KIADB to allot 60 acres of land at IT park, adjacent to already allotted land subject to availability.
2. **Water:** 13 lakh LPD of water to be supplied by KIADB.

**3. Power:** 10,000 KVA of Power to be serviced by BESCOM.

**4. Incentives & Concessions:** As per applicable Industrial & SEZ Policy of the State.

**GENERAL TERMS AND CONDITIONS :**

1. **Environment:** Promoters to obtain CFE from KSPCB. Environmental Clearance from MOEF, GOI / DFEE GOK as applicable.

2. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka (Dr. Sarojini Mahishi report). A copy of Human Resources Development plan shall be sent to the Commissioner for I.D. & Director of Industries and Commerce for monitoring.

3. **Vendor Development:** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.

4. **Social Infrastructure Development:** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.

**Others:**

a) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.

b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of land allotment by KIADB.

By Order and in the name of the Governor of Karnataka,

**JYOTHI R.J**

Desk Officer (Technical Cell)

Commerce & Industries Department.

**PR-1752**